॥ ಶ್ರೀ ॥

# ಶ್ರೀಪಾದರಾಜಕಥಾಮೃತ.

ಲೇಖಕ:—

ಭೀಮಾಚಾರ್ಯ ಒಡವಿ,

ಮಾಸ್ತರ ಹೂಲಿಹಳ್ಳಿ.

ಪ್ರಕಾಶಕ:—

ಯ. ಗು. ಕುಲಕರ್ಣಿ,

ಸಂ. ಸ. ಚ. ಆನಂದವನ.

೧೯೩೧

ಬೆಲೆ ೧೨ ಆಣೆ.

# ಗ್ರಂಥಕರ್ತನ ಎರಡು ಮಾತುಗಳು.

ಈಗ ಎರಡು ವರ್ಷಗಳ ಹಿಂದೆ ಶ್ರೀ ಸತ್ಯಸಂಧ ಕಥಾಮೃತವನ್ನು ಬರೆದಾಗ್ಗೆ ಅದರ ಪ್ರಸ್ತಾವನೆಯಲ್ಲಿ—ಇನ್ನು ಮುಂದೆ ಕರ್ಣಾಟಕದೇಶ-ಕರ್ಣಾಟಕ ಭಾಷೆಯ ಮೇಲೆ ಮಹೋಪಕಾರ ಮಾಡಿರುವಂಥ ಮಹನ್ನೀಯರ ಚರಿತ್ರಗಳನ್ನು ಅಂದರೆ ಶ್ರೀಪಾದರಾಜಕಥಾಮೃತ (ದಾಸಕೂಟದ ಅರುಣೋದಯ), ಶ್ರೀ ವ್ಯಾಸರಾಜ ಕಥಾಮೃತ(ಸೂರ್ಯೋದಯ), ಶ್ರೀ ಪುರಂದರದಾಸರು (ಮಧ್ಯಾಹ್ನ), ಕರ್ಣಾಟಕ ಭಕ್ತವಿಜಯ (ನೂರಾರು ದಾಸರ ಚರಿತ್ರ) ಎಂಬೀ ನಾಲ್ಕು ಗ್ರಂಥಗಳನ್ನು ಯಥಾಮತಿ ಬರೆಯಬೇಕೆಂದು ಸಂಕಲ್ಪ ಮಾಡಿಕೊಂಡಿದ್ದೆನು. ಶ್ರೀಹರಿ-ಗುರುಗಳ ಕೃಪಾಕಟಾಕ್ಷ ಬಲದಿಂದಲೂ ಆಸ್ತಿಕ ಮಹಾಶಯರಾದ ವಾಚಕ-ವಾಚಕಿಯರ ಪ್ರೋತ್ಸಾಹನದಿಂದಲೂ, ಅನೇಕ ವಿದ್ವಾಂಸರ ಸಹಾಯ-ಸಂಪತ್ತಿಯಿಂದಲೂ ಕ್ಷುದ್ರಾದಪಿಕ್ಷುದ್ರನಾದ ನನ್ನೀ ಸಂಕಲ್ಪದಲ್ಲಿ ಮೊದಲನೆಯದಾದ ದಾಸಕೂಟದ ಅರುಣೋದಯವೆಂಬ ಈ ಗ್ರಂಥವು ಈ ವರ್ಷ ಚಂದ್ರಿಕೆಯ ದ್ವಾರಾ ಪ್ರಕಟವಾದದ್ದು ಅತ್ಯಂತ ಆನಂದದ ಸಂಗತಿಯಾಗಿರುವದು. ಇದರಂತೆಯೇ ಇನ್ನುಳಿದ ಮೂರು ಗ್ರಂಥಗಳ ಸಂಕಲ್ಪವನ್ನು ಕೊನೆಗಾಣಿಸಲು ಆ ಸತ್ಯಸಂಕಲ್ಪನಾದ ಪರಮಾತ್ಮನನ್ನೇ ಪ್ರಾರ್ಥಿಸುತ್ತಿರುವೆನು. ಆತನ ಅನುಗ್ರಹವಾದ ಪಕ್ಷದಲ್ಲಿ ಮುಂದಿನ ವರ್ಷವೇ ಸೂರ್ಯೋದಯವು ಪ್ರಕಟವಾಗಬಹುದು. ಇದಕ್ಕೋಸ್ಕರ ಇಲ್ಲಿಯ ವರೆಗೆ ಪ್ರೋತ್ಸಾಹಿಸಿದ ವಾಚಕ ಮಹಾಶಯರನ್ನೂ, ವಿದ್ವಾಂಸರನ್ನೂ ಶತಶಃ-ಸಹಸ್ರಶಃ ಅಭಿವಂದಿಸುವೆನಲ್ಲದೆ, ಮುಂದಾದರೂ ಅವರ ಸಹಾಯಸಂಪತ್ತಿಯನ್ನೇ ಇದಿರು ನೋಡುತ್ತಿರುವೆನು.

ನೂರಿನ್ನೂರು ದಾಸರ ಚರಿತ್ರೆಯನ್ನೊಳಗೊಂಡ ನಾಲ್ಕನೆಯ ಗ್ರಂಥವು ಪ್ರಕಟವಾಗಬೇಕಾದರೆ ಕರ್ಣಾಟಕದ ನಾಲ್ಕು ದಿಕ್ಕುಗಳಿಂದಲೂ ಸಹಾಯವು ದೊರೆಯಬೇಕಾದುದು ಅವಶ್ಯವಾಗಿರುವುದು. ಕಾರಣ ದಾಸಕೂಟದ ಮಾಹಿತಿಯುಳ್ಳ ಅಥವಾ ದಾಸಕೂಟದ ಸಂಗ್ರಹವುಳ್ಳವರು ಗುಪ್ತಧನದಂತಿರುವ ತಮ್ಮಲ್ಲಿಯ ಮಾಹಿತಿಯನ್ನು ನನಗೆ ತಿಳಿಸುವ ಅನುಗ್ರಹ ಮಾಡಬೇಕೆಂದು ಬೇಡಿಕೊಳ್ಳುತ್ತಿರುವೆನು. ಬರೆದು ತಿಳಿಸಲು ಶಕ್ಯವಿದ್ದಂಥವರು ಅಷ್ಟು ಉಪಕಾರವನ್ನು ಮಾಡಬೇಕು. ಯಾರಿಗೆ ಬರೆದು ತಿಳಿಸಲು ಶಕ್ಯವಿಲ್ಲವೋ, ಅಂಥವರು ನನಗೊಂದು ಪತ್ರ ಬರೆದರೆ ನಾನೇ ಅವರಲ್ಲಿಗೆ ಹೋಗಿ ಸಂಗ್ರಹಿಸಿಕೊಂಡು ಬರುವೆನು. ಭಾವಿಕರಾದ ಮಹನ್ನೀಯರು ಈ ವಿಷಯದಲ್ಲಿ ಉದಾಸೀನರಾಗಬಾರದೆಂದೂ, ಇದ್ದಲ್ಲಿಂದ ಸಹಾಯವನ್ನೊದಗಿಸಲು ಯತ್ನಮಾಡಬೇಕೆಂದೂ ಇನ್ನೊಮ್ಮೆ ಪ್ರಾರ್ಥಿಸುವೆನು.

ಅಲ್ಲದೆ—ಸತ್ಪುರುಷರ ಸ್ಥಾನದಲ್ಲಿಯೇ ಅವತರಿಸಿ, ಸತ್ಪುರುಷರ ಸೇವೆಯಲ್ಲಿಯೇ ನಿರತಳಾದಂಥ ಚಂದ್ರಿಕೆಯು ನನ್ನೀ ಸತ್ಪುರುಷರ ಚರಿತ್ರೆಗಳಿಗಲ್ಲ ಅವಕಾಶ ಕೊಟ್ಟದ್ದಕ್ಕಾಗಿ ಆ ಚಂದ್ರಿಕೆಯನ್ನು ನಿರಂತರವೂ ಅಭಿನಂದಿಸುತ್ತಿರುವೆನು. ಇತಿ. ಭೀಮಾಚಾರ್ಯ ಹಡಪ. (ಕಾವ್ಯರತ್ನ.)

# ಶ್ರೀಪಾದರಾಜ ಕಥಾಮೃತ.

ಅಥವಾ

## ದಾಸಕೂಟದ ಅರುಣೋದಯ.

---

### (ಪ್ರಥಮ ಪಟಲ.)

ಆಪಾದ ಮೌಳಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನವಿಘ್ನಾಃ ಪ್ರಣಶ್ಯಂತಿ ಸಿಧ್ಯಂತಿ ಚ ಮನೋರಥಾಃ ॥
ಓನ್ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ ॥
ನಮಃ ಪುರಂದರಾರ್ಯಾಯ ವಿಜಯರಾಜಾಯತೇ ನಮಃ ॥

---

ಪ್ರಲ್ಹಾದ ನಾರದ ಪರಾಶರ ಪುಂಡರೀಕ ।
ವ್ಯಾಸಾಂಬರೀಷ ಶುಕ ಶೌನಕ ಭೀಷ್ಮಕಾದ್ಯಾ ॥
ರುಕ್ಮಾಂಗದಾರ್ಜುನ ವಸಿಷ್ಠ ವಿಭೀಷಣಾದಿ ।
ಪುಣ್ಯಾನಿಮಾಂಪರಮ ಭಾಗವತಾನ್ ಸ್ಮರಾಮಿ ॥

---

ಹದಿನಾಲ್ಕು ಲೋಕವನ್ನೂ ಹೊಟ್ಟೆಯಲ್ಲಿಟ್ಟು ರಕ್ಷಿಸುವಂಥ, ಅಣು-ರೇಣು-ತೃಣ-ಕಾಷ್ಠ ಪರಿಪೂರ್ಣನಾದಂಥ ಪರಮಾತ್ಮನು ಕೂಡ ಸ್ವಪ್ರಯೋಜನವಿಲ್ಲದೆ ತನ್ನ ಭಕ್ತರ ಉದ್ಧಾರಕ್ಕೋಸ್ಕರವಾಗಿಯೇ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ರೂಪದಿಂದ ಅವತರಿಸುತ್ತಿರುವದು ಸಕಲರಿಗೂ ತಿಳಿದ ವಿಷಯವೇ ಆಗಿರುವದು. ಅಂತೆಯೇ ಆತನು ಮತ್ಸ್ಯ-ಕೂರ್ಮಾದ್ಯನೇಕ ಅವತಾರಗಳನ್ನು ಎತ್ತಬೇಕಾಯಿತು. ಈ ಪ್ರಕಾರ ಪರಮಾತ್ಮನೇ ಅವತರಿಸುತ್ತಿರಲು ಆತನ ಅನುಯಾಯಿಗಳಾದ ದೇವತೆಗಳೂ, ಋಷಿಗಳೂ ಹೇಗೆ ಸುಮ್ಮನೆ ಕುಳಿತುಕೊಳ್ಳುವರು? ಭಗವಂತನ ಸೇವೆಯೇ ಅವರ ಕರ್ತವ್ಯವಲ್ಲವೆ? ಅದರಲ್ಲಿಯೂ ಭಕ್ತೋದ್ಧಾರವೇ ಶ್ರೇಷ್ಠವಾದ ಕಾರ್ಯವೆಂದು ಭಗವಂತನು ತನ್ನ ಸ್ವಂತ ಉದಾಹರಣೆಯಿಂದ ಲೋಕಕ್ಕೆ ತೋರಿಸಿ ಕೊಡುತ್ತಿರಲು, ಇವರಾದರೂ ಸಜೀವಿ

ಗಳಿಗೆ ಜ್ಞಾನೋಪದೇಶ ಮಾಡಿ ಅವರನ್ನು ಉದ್ಧಾರ ಮಾಡುವದೇ ತಮ್ಮ ಶ್ರೇಷ್ಠಕಾರ್ಯವೆಂತಲೂ, ಇದೇ ಮುಖ್ಯವಾದ ದೇವರ ಸೇವೆಯೆಂತಲೂ ತಿಳಿದುಕೊಂಡು ಈ ಭರತಖಂಡವೆಂಬ ಪುಣ್ಯಭೂಮಿಯಲ್ಲಿ ಆಗಾಗ್ಗೆ ಅವತರಿಸ ಹತ್ತಿದರು

ಓ ಭಾರತೀಯರಿರಾ! ನಾವು ಜನಿಸಿರುವ ಈ ಭಾರತಭೂಮಿಯು ಸಾಮಾನ್ಯವಾದುದೆಂದು ಎಣಿಸಬೇಡಿರಿ.

"ಗಾಯಂತಿ ದೇವಾಃ ಕಿಲಗೀತಕಾನಿ |
ಧನ್ಯಾಸ್ತುತೇ ಭಾರತ ಭೂಮಿ ಭಾಗೇ ||
ಸ್ವರ್ಗಾಪವರ್ಗಾಸ್ಪದ ಮಾರ್ಗ ಭೂತೇ |
ಭವಂತಿ ಭೂಯಃ ಪುರುಷಾಃ ಸುರತ್ವಾತ್ ||"

(ಪಾರಮಾರ್ಥ ಸಾಮ್ರಾಜ್ಯವನ್ನು ಪಡೆಯುವದಕ್ಕೆ ಸಾಧನೀಭೂತವಾದ ಭರತ ಭೂಮಿಯಲ್ಲಿ ಜನಿಸತಕ್ಕ ಮಹಾತ್ಮರು ನಮಗಿಂತಲೂ ಧನ್ಯತಮರೆಂದು ದೇವತೆಗಳು ಗಾನಮಾಡುತ್ತಿರುವರು.)

ಎಂದಾಗಿ—ಸ್ವರ್ಗಸುಖದಲ್ಲಿ ಲೋಲಾಡತಕ್ಕಂಥ, ಅಮೃತಪಾನೀಯರಾದಂಥ ದೇವತೆಗಳೂ ಗಾನ ಮಾಡುತ್ತಿರುವರೆಂದಮೇಲೆ ಇದರ ಮಹತ್ವವನ್ನು ಇನ್ನೆಷ್ಟೆಂದು ಹೇಳೋಣ! ಅತ ಏವ ನಮ್ಮ ಭರತ-ಖಂಡವು ಯುಗಯುಗಾಂತರಗಳಿಂದಲೂ ಮಹಾತ್ಮರ ಅವತಾರಕ್ಕೆ ಲೀಲಾಕ್ಷೇತ್ರವಾಯಿತು; ಭಕ್ತಿಮಾರ್ಗಕ್ಕೆ ತೌರುಮನೆಯೆನಿಸಿತು. ಇದೊಂದು ನಮ್ಮ ಪುಣ್ಯೋದಯವೇ ಸರಿ. ಹೀಗೆ ಇವರ ಅವತಾರವೇ ಆಗದಿದ್ದ ಪಕ್ಷದಲ್ಲಿ ವೇದಗಳ ಸತ್ಯಾರ್ಥವೆಲ್ಲ ನಷ್ಟವಾಗಿ ಅಪಾರ್ಥಕಲ್ಪನೆಯೇ ಹೆಚ್ಚಾಗಿ ಬೆಳೆದು ಎಲ್ಲವೂ ಕೆಟ್ಟು ಹೋಗುತ್ತಿತ್ತು. ಹಾಗಾಗಬಾರದೆಂದೇ ಭಗವಂತನು ದೇವತೆಗಳನೇಕರನ್ನು ಅಪ್ಪಣೆಕೊಟ್ಟು ಈ ಸಾಧನ ಭೂಮಿಗೆ ಕಳಿಸಿದನೆಂದು ಹೇಳಬಹುದು. ಈ ಪ್ರಕಾರ ಅವತರಿಸಿ ಬಂದ ದೇವತೆಗಳ ನಿಜಾರ್ಥವನ್ನೆಲ್ಲ ಸ್ಪಷ್ಟಪಡಿಸಿ ಉತ್ತಮ ಜೀವಿಗಳಾದವರಿಗೆ ಜ್ಞಾನಬೋಧಮಾಡಿ ಮೋಕ್ಷೋಪಾಯವನ್ನು ಕರತಲಾಮಲಕವಾಗುವಂತೆ ಮಾಡಿಬಿಟ್ಟರು.

ತ್ರಯೋರ್ಥಾಃ ಸರ್ವವೇದೇಷು ದಶಾರ್ಥಾ ಭಾರತೇಸ್ಥಿತಾಃ ||
ವಿಷ್ಣೋಃ ಸಹಸ್ರನಾಮಾಪಿ ನಿರಂತರ ಶತಾರ್ಥಕಂ ||

ಎಂಬಂತೆ—ವೇದಗಳಿಗೆ ಮೂರು ಅರ್ಥಗಳಿರುವದರಿಂದ ಇಂಥ ದೇವತೆಗಳ ಅವತಾರದಹೊರತು ಅವುಗಳ ನಿಜಾರ್ಥವು ಹೊರಬೀಳುವ ಹಾಗಿದ್ದಿಲ್ಲ. ಅವರ ಅನೇಕಾನೇಕ ಟಿಪ್ಪಣಿಗಳಿಂದ ಆ ಮಾರ್ಗವು ಸುಗಮವಾಯಿತು. ಆದರೇನು? ಬರಬರುತ್ತ ಕಲಿಪ್ರಾಬಲ್ಯ ದೋಷದಿಂದಲೋ, ಅನೀತಿ-ಅನಾಚಾರಗಳ ಹೆಚ್ಚುವಿಕೆಯಿಂದಲೋ ಜನರಲ್ಲಿ ಅಜ್ಞಾನವು ಹೆಚ್ಚಾಗುತ್ತ ಬಂತು. ವೇದಾರ್ಥವನ್ನು ತಿಳಿಯುವದಂತೂ ಇರಲಿ, ಅವುಗಳಿಗೆ ಗೀರ್ವಾಣ ಭಾಷೆಯಲ್ಲಿ ಬರೆದ ಟೀಕಾಟಿಪ್ಪಣಿಗಳು ಸಹ ತಿಳಿಯದಷ್ಟು ಮಂದತ್ವವುಂಟಾಯಿತು. ಮೊದಲು ಪರಮಾತ್ಮನೇ ಶ್ರೀ ವೇದವ್ಯಾಸ ರೂಪದಿಂದ ಅವತರಿಸಿ ವೇದಾರ್ಥವು ಗಡಚೆಂದು ಅವನ್ನು ತಿಳಿಯುವಂತೆ ವಿಭಾಗಿಸಿದ್ದನು. ಮುಂದೆ ಅದು ತಿಳಿಯದ ಹಾಗಾಗಲು ಅದರ ಸಾರವನ್ನೇ ತೆಗೆದು ಪುರಾಣಗಳನ್ನು ರಚಿಸಿದನು. ಇವೂ ತಿಳಿಯದಂತಾಗಲು ದೇವತೆಗಳನೇಕರನ್ನು ಇಲ್ಲಿಗೆ ಕಳಿಸಿ ಅವುಗಳಿಗೆ ಟಿಪ್ಪಣಿಗಳನ್ನು ಮಾಡಿಸಿದನು. ಆದರೂ ಮುಂದಿನವರಿಗೆ ಆ ಟೀಕಾಟಿಪ್ಪಣಿಗಳೇ ಮೂಲ ವೇದದಷ್ಟು ಗಡಚಾಗಿ ತೋರಹತ್ತಿದಮೇಲೆ ದೇವರು ಇವನ್ನೇನು ಮಾಡಬೇಕು? ಆಗ ಆತನಿಗೆ ಯೋಚನೆಯಾಯಿತು. ಏನು ಮಾಡಿದರೆ ಕಲಿಕಾಲದ ಮಂದ ಜ್ಞಾನಿಗಳಿಗೆ ಜ್ಞಾನವುಂಟಾದೀತೆಂದು ಕ್ಷಣಮಾತ್ರ ಯೋಚಿಸಿ ನೋಡಿದನು.

‘ವಕ್ತುರೇವ ಹಿತಜಾಡ್ಯಂ ಶ್ರೋತಾಯತ್ರ ನ ಬುಧ್ಯತೆ’ ||

ಅಂದರೆ—ಕೇಳುವವನಿಗೆ ತಿಳಿಯದೆ ಹೋದರೆ ಹೇಳುವವನಲ್ಲಿಯೇ ದೋಷವಿರುತ್ತದೆಂಬ ತತ್ವವನ್ನನುಸರಿಸಿ ಕೂಡಲೆ ಕೆಲವು ದೇವತೆಗಳನ್ನು ಅವತಾರಮಾಡಲಪ್ಪಣೆಕೊಟ್ಟು ಕಳಿಸಿಬಿಟ್ಟನು. ಅವರು ಹಿಂದಿನವರಂತೆ ಗೀರ್ವಾಣಭಾಷೆಯ ಗೊಂದಲಕ್ಕೆ ಹೋಗಲಿಲ್ಲ. ಯಾಕಂದರೆ—ಯಾವದೊಂದು ವಿಷಯವು ಆಯಾ ದೇಶಭಾಷೆಯಿಂದ ಸುಗಮವಾಗಿ, ಸೂಕ್ಷ್ಮವಾಗಿ ತಿಳಿದಂತೆ ಪರಭಾಷೆಯಿಂದ ಎಂದಿಗೂ ತಿಳಿಯಲಾರದಲ್ಲವೆ? ಗೀರ್ವಾಣಭಾಷೆಯ ಅಭ್ಯಾಸವಾದರೋ ಬರಬರುತ್ತ ಕಡಿಮೆಯಾಗಿ ಆ ಸ್ಥಳವನ್ನು ದೇಶಭಾಷೆಗಳು ಆಕ್ರಮಿಸಿದ್ದವು; ಮತ್ತು ಪೂರ್ವಜರ ವಿದ್ಯಾಭ್ಯಾಸ, ಗುರುಭಕ್ತಿ, ಸತತೋದ್ಯೋಗಗಳೆಲ್ಲ ಮೂಲೆಗುಂಪಾಗುತ್ತ ಬಂದಿದ್ದವಲ್ಲದೆ ಚಿತ್ತಚಾಂಚಲ್ಯ-ವಿಷಯಾಸಕ್ತಿಗಳು ಹೆಚ್ಚಾಗಿ ಮಾನಸಿಕ-ಶಾರೀ

ರಿಕ ಬಲಗಳೆಲ್ಲ ಕ್ಷೀಣಿಸುತ್ತ ಹೋಗಿದ್ದವು. ಇಂಥ ಪರಿಸ್ಥಿತಿಯಲ್ಲಿ ಮೊದಲಿನಂತೆಯೇ ಗೀರ್ವಾಣ ಭಾಷೆಯ ಬಿಗುವು ಹೇಗೆ ಉಳಿಯಬೇಕು? ಅದು ಬಹಳ ಸಡಿಲಾಗಿ ಲಿಕಿಲಿಕಿಯಾಗಿತ್ತು. ಅಲ್ಲದೆ—

"ಶ್ರುತಿಪತಿ ಕಥಾಸ್ಮಿತವೆನಿಸಪ್ರಾ| ಕೃತವೆ ತಾ ಸಂಸ್ಕೃತವೆನಿಸ ಸ|
ದ್ಗತಿಯ ನೀವುದು ಭಕ್ತಿಪೂರ್ವಕ ಕೇಳಿ ಪೇಳ್ವರಿಗೆ||"
"ಪ್ರಾಕೃತೋಕ್ತಿಗಳೆಂದು ಬರಿದೆ ನು| ಪಾಕೃತಘ್ನರು ಜರಿವರಲ್ಲದೆ|
ಸ್ವೀಕೃತವ ಮಾಡದಲೆ ಬಿಡುವರೆ ಕುರುಹು ಕವಿಗಳಿಗೆ ||
ಶ್ರೀಕೃತಾಪತಿಯಮಲ ಗುಣಗಳು| ಈ ಕೃತಿಯೊಳುಂಟಾದ ಬಳಿಕ|
ಪ್ರಾಕೃತವೆ? ಸಂಸ್ಕೃತದ ಸಡಗರವೇನು ಸುಗುಣರಿಗೆ||"
(ಹರಿಕಥಾಮೃತ ಸಾರ)

ಎಂಬಂತೆ—ಕೇವಲ ಸಂಸ್ಕೃತದಲ್ಲಿಯೇ ಗ್ರಂಥ ರಚನೆ ಮಾಡಬೇಕೆಂಬ ಹಾಗೂ ಪ್ರಾಕೃತಭಾಷೆಯಲ್ಲಿ ಮಾಡಲೇ ಕೂಡದೆಂಬ ದುರಾಗ್ರಹವೂ ಅಳಿಯುತ್ತ ಬಂದಿತ್ತು. ಆದರಿಂದ ಸಾರ್ವತ್ರಿಕ ಸಮದೃಷ್ಟಿಯುಳ್ಳ ಈ ಮಹನ್ನೀಯರು—

"ಸಮ ಸಂಸ್ಕೃತದ ಸೊಲ್ಲು ಸಾಯುಜ್ಯಮಂ ಮುನ್ನಾಗಿತ್ತುದೈ
ಕನ್ನಡದ ಹರಿನಾಮ ಕೈವಲ್ಯವನ್ನೀಯದೇ||"

ಎಂದು ಹೇಳುವ ಕವಿಭಾಷಿತದಂತೆ ವೇದ-ಶಾಸ್ತ್ರಗಳ ರಹಸ್ಯವನ್ನೆಲ್ಲ ತೆಗೆದು ಪ್ರಾಕೃತ ಭಾಷೆಯಲ್ಲಿಯೇ ಗದ್ಯ-ಪದ್ಯಗಳ ರೂಪದಿಂದ ತೀರ ಪಾಮರರಿಗೂ ತಿಳಿಯುವಂತೆ ಮಾಡಿಟ್ಟರು. ಆಟಕ್ಕೆ ತಕ್ಕ ವೇಷ, ವೇಷಕ್ಕೆ ತಕ್ಕ ಭಾಷೆ. ಪರಮಾತ್ಮನ ಅಭಿಪ್ರಾಯವೂ ಹೀಗೆಯೇ ಇತ್ತು. ಹೀಗೆ ಭಾಷಾಭೇದದಿಂದ ವೇದ-ಶಾಸ್ತ್ರಗಳ ರಹಸ್ಯವನ್ನು ತಿಳಿಯುವಂತೆ ಮಾಡಿದವರಲ್ಲಿ ಒಡೆದು ಕಾಣುವಂಥ ಎರಡು ಪಂಗಡಗಳಾದವು. ಗೀರ್ವಾಣ ಭಾಷೆಯಲ್ಲಿಯೇ ಗ್ರಂಥಗಳನ್ನು ಬರೆದು—ಪಂಡಿತರಿಗೆ ಮಾತ್ರ ತಿಳಿಯುವ ಹಾಗೆ ಮಾಡಿಟ್ಟ ಮೊದಲನೇ ಪಂಗಡದವರಿಗೆ ವ್ಯಾಸಕೂಟಸ್ಥರೆಂತಲೂ—ಪ್ರಾಕೃತಭಾಷೆಯಲ್ಲಿ ಹಾಡು ಮೊದಲಾದವುಗಳನ್ನು ರಚಿಸಿ ಪಂಡಿತ-ಪಾಮರರ ಸಮೂಹಕ್ಕೇ ತಿಳಿಯುವಂತೆ ಮಾಡಿದ ಎರಡನೆಯ ಪಂಗಡದವರಿಗೆ ದಾಸಕೂಟಸ್ಥರೆಂತಲೂ ಸಾಮಾನ್ಯವಾಗಿ ಹೆಸರುಗಳುಂಟಾದವು. ವ್ಯಾಸಕೂಟಸ್ಥರಲ್ಲಿ-ಶ್ರೀಮಧ್ವಾಚಾರ್ಯರು, ಟೀಕಾಚಾರ್ಯರು ಮುಂತಾ

ದವರು ಬರುವರು. ದಾಸಕೂಟಸ್ಥರಲ್ಲಿ ಶ್ರೀಪಾದರಾಯರು, ವ್ಯಾಸರಾಯರು, ಪುರಂದರ ದಾಸರು ಇತ್ಯಾದ್ಯನೇಕರು ಬರುವರು. ಆದರೂ ಇವರಲ್ಲಿ—ಶ್ರೀಪಾದರಾಯರು-ವ್ಯಾಸರಾಯರು-ವಾದಿರಾಜರೇ ಮುಂತಾದವರಿಗೆ ದಾಸಕೂಟಸ್ಥರೆಂದು ಹೇಳುವದು ವಾಡಿಕೆಯಲ್ಲಿರುವದಿಲ್ಲ. ಯಾಕಂದರೆ ಇವರು ಕೇವಲ ಹರಿದಾಸರಾಗಿ ಕೈಯಲ್ಲಿ ತಂಬೂರಿಯನ್ನು ಹಿಡಿದುಕೊಂಡು ಸೇವೆ ಮಾಡಿದವರಲ್ಲ. ಹೀಗೆ ಸೇವೆ ಮಾಡಿದವರಲ್ಲಿ ಶ್ರೀಪುರಂದರದಾಸರೇ ಎಲ್ಲಕ್ಕೂ ಮೊದಲನೆಯವರೆಂದು ಹೇಳಬಹುದು. ಆದ್ದರಿಂದ ದಾಸಕೂಟದವರು— ತಮ್ಮ ಮೂಲ ಪುರುಷರು ಪುರಂದರದಾಸರೆಂದು ಇವತ್ತಿಗೂ ಹೇಳಿಕೊಳ್ಳುತ್ತಿದ್ದಾರೆ. ಇದರಿಂದಲೇ ಇವರಿಗೆ 'ದಾಸರಾಯ ಸಾರ್ವಭೌಮ' ಎಂಬ ಗೌರವದ ಹೆಸರುಂಟಾಗಿರುವದು ಇರಲಿ—

ಆದರೆ—ವ್ಯಾಸಕೂಟ-ದಾಸಕೂಟ ಹೀಗೆ ಎರಡೂ ಬಗೆಯ ಕಾರ್ಯಗಳನ್ನು ಮಾಡಿದ ಮಹಾತ್ಮರು ಕೆಲವರು ಆಗಿ ಹೋದರು. ಅವರು ಸಂಸ್ಕೃತ ಭಾಷೆಯಲ್ಲಿ ಹೇಗೆ ಗ್ರಂಥಗಳನ್ನು ಬರೆದರೋ ಹಾಗೆಯೆ ಕರ್ನಾಟಕ-ಭಾಷೆಯಲ್ಲಿ ಕರ್ನಾಟಕ-ದೇಶದಲ್ಲಿ ಅಭಿಮಾನವಿಟ್ಟು ಅನೇಕ ಕವನಗಳನ್ನೂ-ಗ್ರಂಥಗಳನ್ನೂ ಬರೆದಿಟ್ಟರು. ಇಷ್ಟೇ ಅಲ್ಲ, ನಮ್ಮ ಪುರಾಣ ಪುಣ್ಯಕಥೆಗಳಲ್ಲಿ ವರ್ಣಿತವಾದ ಅತ್ಯದ್ಭುತ ಕಾರ್ಯಕಲಾಪಗಳನ್ನು ಸಹ ತಮ್ಮ ಅಗಾಧವಾದ ಶಕ್ತಿಯಿಂದ ಮಾಡಿತೋರಿಸಿ ಜಗತ್ತನ್ನೇ ದಂಗುಬಡಿಸಿದರು. ಹಿಂದಕ್ಕೆ ಏನೋ—ಹನುಮಂತನು ಶ್ರೀರಾಮನಲ್ಲಿಟ್ಟ ಅತೀವ ಭಕ್ತಿಯ ಬಲದಿಂದ ಸಮುದ್ರವನ್ನು ಗೋಷ್ಪದದಂತೆ ಹಾರಿ ಹೋದನು; ಅಗಸ್ತ್ಯಋಷಿಗಳು ಸಮುದ್ರದ ಅಪಾರವಾದ ಜಲರಾಶಿಯನ್ನೇ ಏಕಾಪೋಶನ ಮಾಡಿಬಿಟ್ಟರು; ನಾರದ ಮಹರ್ಷಿಗಳು ಹದಿನಾಲ್ಕು ಲೋಕದಲ್ಲಿಯೂ ತಡೆಯಿಲ್ಲದೆ ಮನೋವೇಗದಿಂದ ಸಂಚರಿಸುತ್ತಿದ್ದರು ಇತ್ಯಾದಿ ಇತ್ಯಾದಿ ಕಥೆಗಳನ್ನೆಲ್ಲ ನಾವು ಪುರಾಣದಲ್ಲಿ ಓದುತ್ತಿದ್ದೆವು, ಕೇಳುತ್ತಿದ್ದೆವು. ಹಾಗೂ ಪ್ರಕೃತಸ್ಥಿತಿಯಲ್ಲಿ ಇವೆಲ್ಲ ಕಟ್ಟುಕಥೆಗಳೆಂದೂ, ಹಾಳು ಹರಟೆಗಳೆಂದೂ ಅಶ್ರದ್ಧೆಯಗಿ ಎಣಿಸುತ್ತಿದ್ದೆವು. ಬರಬರುತ್ತ—

"ಪಾಂಡಿತ್ಯಹೀನಾಃ ಕವಯೋಭವಂತಿ ಕವಿತ್ವ ಹೀನಾಶ್ಚ ಪುರಾಣಭಟ್ಟಾಃ॥
ಪುರಾಣಹೀನಾಃ ಕೃಷಿಮಾಶ್ರಯಂತಿ ನಷ್ಟೇಕೃಷೌ ಭಾಗವತಾಭವಂತಿ"॥

ಎಂದು ಹೇಳಿಕೊಳ್ಳಲೂ ನಾವು ಹಿಂಜರಿಯಲಿಲ್ಲ. ಇಂಥ ಮಂದಮತಿಗಳಿ ಗೋಸ್ಕರವಾಗಿಯೇ ಮೇಲೆ ಹೇಳಿದ ಮಹಾನುಭಾವರು ಅವತರಿಸಿ ಅಶಕ್ಯ ವಾದ ಕಾರ್ಯಗಳನ್ನೂ ಶಕ್ಯವಾಗಿ ಮಾಡಿತೋರಿಸಿ ನಾವು ಮಿಥ್ಯವೆಂದು ತಿಳಿಯುವ ಸಂಗತಿಗಳನ್ನೆಲ್ಲ ತಥ್ಯವೆಂದು ತಿಳಿಯುವ ಹಾಗೆ ಮಾಡಿಟ್ಟರು.

ಕರ್ನಾಟಕ ವಾಙ್ಮಯದಲ್ಲಿ ಇವರು ಮಾಡಿದ ಕಾರ್ಯವು ಬಂಗಾ ರದ ಅಕ್ಷರಗಳಿಂದ ಬರೆದಿಡುವಂತಿದೆ. ಇಂಥವರಿಗೇ ಮಹಾತ್ಮರು— ಸತ್ಪುರುಷರು ಎಂದು ಕರೆಯುವದು 'ಪೂಜ್ಯೇಷ್ವನುರಾಗೋ ಭಕ್ತಿಃ' (ದೊಡ್ಡವರ ವಿಷಯದಲ್ಲುಂಟಾಗುವ ಅನುರಾಗವೇ ಭಕ್ತಿಯು) ಎಂಬಂತೆ ಇವರು ಮುಖ್ಯವಾಗಿ ಜಗತ್ಪೂಜ್ಯನಾದ ಭಗವಂತನಲ್ಲಿಟ್ಟ ಅತೀವ ಭಕ್ತಿ ಯೋಗದಿಂದಲೇ ಇಂತಹ ಅದ್ಭುತ ಸಾಮರ್ಥ್ಯವನ್ನು ಪಡೆದು ಶಾಪಾದಪಿ ಶರಾದಪಿಗಳೆಂದು ಹೊಗಳಿಸಿಕೊಳ್ಳುವವರಾದರು. ಅಂದಬಳಿಕ ಇಂಥವರ ಚಿತ್ರಚರಿತ್ರಗಳು ಹಿಂದಕ್ಕಿಂತ ಹಿಂದು ವಿಚಿತ್ರಗಳಾಗಿಯೇ ತೋರಿದರೆ ಆಶ್ಚರ್ಯವೇನು? ಅವುಗಳನ್ನು ಕೇಳುವದಕ್ಕೆ ಭಾವಿಕ ಜನರು ಮುಗಿ ಬೀಳುತ್ತಿದ್ದಲ್ಲಿ ಸೋಜಿಗವೇನು? ಯಾವ ಮನುಷ್ಯನು ಸದ್ಗತಿಯುಂಟಾಗ ಬೇಕೆಂದು ಬಯಸುವನೋ ಅವನು ಅವಶ್ಯವೇವ ಇಂಥ ಸಜ್ಜನರ ಸಹ ವಾಸವನ್ನು ಮಾಡಲೇಬೇಕು. ಇದಕ್ಕಿಂತಲೂ ಹೆಚ್ಚಿನ ಸಾಧನವು ಭೂಮಿಯ ಮೇಲೆ ಇನ್ನೊಂದು ಇಲ್ಲವೇ ಇಲ್ಲ. ಅತಏವ ಶ್ರೀ ಕೃಷ್ಣಪರ ಮಾತ್ಮನು ಉದ್ಧವನನ್ನು ಕುರಿತು ಹೀಗೆ ಹೇಳಿರುವನು:—

"ತತೋದುಃಸಂಗಮುತ್ಸೃಜ್ಯ ಸತ್ಸುಸಜ್ಜೇತ ಬುದ್ಧಿಮಾನ್||
ಸಂತ ಏತಸ್ಯ ಛಿಂದಂತಿ ಮನೋವ್ಯಾಸಂಗ ಮುಕ್ತಿಭಿಃ"||

(ದುಷ್ಟಸಹವಾಸವನ್ನು ತ್ಯಜಿಸಿ ಸತ್ಸಹವಾಸ ಮಾಡಬೇಕು. ಸತ್ಪು ರುಷರು ತಮ್ಮ ಹಿತವಚನಗಳಿಂದ ಮನಸ್ಸಿನ ದುಷ್ಟ ವರ್ತನೆಯನ್ನು ತಪ್ಪಿಸುವರು)

"ಅನ್ನಂ ಹಿ ಪ್ರಾಣಿನಾಂ ಪ್ರಾಣ ಆರ್ತಾನಾಂ ಶರಣಂತ್ವಹಂ ||
ಧರ್ಮೋವಿತ್ತಂ ನೃಣಾಂ ಪ್ರೇತ್ಯ ಸಂತೋಸ್ಮಾದ್ಬಿಭ್ಯತೋರಣಂ"||
(ಭಾಗವತ)

(ಪ್ರಾಣಿಗಳಿಗೆ ಅನ್ನವೇ ಜೀವನ ದುಃಖಿತರಾದವರಿಗೆ ನಾನೇ ರಕ್ಷ

ಕನು. ಪರಲೋಕವನ್ನು ಸೇರಿದವರಿಗೆ ಧರ್ಮವೇ ಹಣ ಸಂಸಾರಾಗ್ನಿಸೆಯಿಂದ ಭೀತರಾದವರಿಗೆ ಸತ್ಪುರುಷರೇ ರಕ್ಷಕರು.)

ಆಹಾ! ಸ್ವಯಂ ಪರಮಾತ್ಮನೇ, ಇಷ್ಟೊಂದು ಹೊಗಳಿದ ಆ ಸತ್ಪುರುಷರ ಮಹಾತ್ಮ್ಯವನ್ನು ಮಂದಮತಿಗಳಾದ ನಾವು ಏನೆಂದು ಹೇಳೋಣ!

ಸುಭಾಷಿತಕಾರರಾದರೂ ಇವರ ವಿಷಯವಾಗಿ ಬಣ್ಣಿಸಿದ್ದು ಅಷ್ಟಿಷ್ಟಲ್ಲ.—

"ಸಜ್ಜನಾಶ್ರಯಮಾತ್ರೇಣ ದುರ್ಜನಃ ಸಜ್ಜನಾಯತೆ ||
ಮಲಯಾಚಲವಾಸೇನ ಇಂಧನಶ್ಚಂದನಾಯತೆ ||
"ಮಹಾನುಭಾವ ಸಂಸರ್ಗಃ ಕಸ್ಯನೋನ್ನತಿ ಕಾರಕಃ ||
ವೀಥ್ಯಂಬುಜಾಹ್ನವೀ ಸಂಗಾತ್ತ್ರಿದಶೈರಪಿ ವಂದ್ಯತೇ" ||

(ಮಲಯಾಚಲದೊಳಗಿದ ಚಂದನದ ಗಿಡಗಳ ಸಮೂಹದಲ್ಲಿರುವ ಉರುವಲು ಕಟ್ಟಿಗೆಗಳೂ ಕೂಡ ಚಂದನವೆಂದೇ ಹೇಗೆ ಎಣಿಸಲ್ಪಡುವವೋ, ಹಾಗೆಯೇ ಸಜ್ಜನರನ್ನಾಶ್ರಯಿಸಿದ ದುರ್ಜನರೂ ಸಹ ಸಜ್ಜನರೆಂದೇ ಎಣಿಸಲ್ಪಡುವರು)

(ಬೀದಿಯಲ್ಲಿ ಹರಿವ ನೀರು ಭಾಗೀರಥಿಯಲ್ಲಿ ಪ್ರವೇಶಿಸಿದ ಕೂಡಲೆ ಹೇಗೆ ಪವಿತ್ರವಾಗಿ ದೇವತೆಗಳಿಗೂ ವಂದನೀಯವಾಗುವದೋ ತದ್ವತ್ ಮಹಾತ್ಮರ ಸಹವಾಸ ಮಾಡಿದ ಎಂತಹ ಅಧಮನಾದರೂ ಉನ್ನತಿಯನ್ನು ಹೊಂದದಿರಲಾರನು)

ಆದುದರಿಂದಲೇ ಅವರು ಕಟ್ಟಕಡೆಗೆ—

"ಸದ್ಭಿರೇವ ಸಹಾಸೀತ ಸದ್ಭಿಃ ಸರ್ವೀತ ಸಂಗತಿಂ ||
ಸದ್ಭಿರ್ವಿವಾದಂ ಮೈತ್ರೀಂಚ ನಾ ಸದ್ಭಿಃ ಕಿಂಚಿದಾಚರೇತ್ ||"

ಅಂದರೆ— ಸಜ್ಜನರೊಡನೆ ಕೂಡಬೇಕು. ಸಜ್ಜನರ ಸಹವಾಸ ಮಾಡಬೇಕು. ಸಜ್ಜನರ ಗೆಳೆತನವಿರಬೇಕು. ಜಗಳಾಡಬೇಕಾದರೂ ಸಜ್ಜನರ ಕೂಡವೇ ಹೊರತು, ದುರ್ಜನರ ಕೂಡ ಯಾವ ವ್ಯವಹಾರವನ್ನೂ ಮಾಡಕೂಡದೆಂದು ಶಾಸನವೊಂದನ್ನೇರ್ಪಡಿಸಿದರು. ಈ ಪ್ರಕಾರ ಸ್ವರ್ಗಲೋಕದಿಂದಿಳಿದು ಬಂದ ಮಹಾನುಭಾವರು ತಮ್ಮ ಕೂಡ ಸ್ವರ್ಗದಿಂದಲೇ ಭೂಲೋಕಕ್ಕೆ ತಂದರೋ ಎಂಬಂತೆ ಭಕ್ತಿಮಾರ್ಗವನ್ನು ಪ್ರಬಲ

ಪಡಿಸಲು ಕಾರಣರಾದರು. ಹೀಗಾದುದರಿಂದ ಬಹುಜನರು ಕಠಿಣವಾದ ಕರ್ಮಮಾರ್ಗಕ್ಕಿಂತಲೂ, ಭಕ್ತಿಮಾರ್ಗವೇ ಮುಕ್ತಿಗೆ ಸಮೀಪವೆಂದರಿತು ಆ ದಾರಿಯನ್ನೇ ಹಿಡಿಯತಕ್ಕವರಾದರು. ಹೀಗೆ ಹೊಸದೊಂದು ಸುಲಭವಾದ ದಾರಿಯನ್ನು ತೋರಿಸಿ ಕೊಟ್ಟವರಲ್ಲಿ ನಮಗೆ ತಿಳಿದಮಟ್ಟಿಗೆ ಶ್ರೀ ಮನ್ನರಹರಿತೀರ್ಥರೇ ( ) ಆದಿಪುರುಷರೆಂದು ಹೇಳಬಹುದಾಗ್ಯಾದರೂ ಅವರು ಕರ್ನಾಟಕ ಭಾಷೆಯಲ್ಲಿ ಮಾಡಿದ ಒಂದೆರಡು ಕೀರ್ತನೆಗಳು ಮಾತ್ರವೇ ಸಿಕ್ಕುತ್ತವೆಯಾದ್ದರಿಂದ ನಾವು ಶ್ರೀಪಾದರಾಯ ಗುರುಗಳನ್ನೇ ಆದ್ಯರೆಂದೆಣಿಸಿ ಅವರ ಕಾಲವೇ ದಾಸಕೂಟದ ಅರುಣೋದಯಕಾಲವೆಂದು ಹೇಳಿರುತ್ತೇವೆ. ಮುಂದೆ ಇವರ ಶಿಷ್ಯರಾದ ಶ್ರೀ ವ್ಯಾಸರಾಯರ ಕಾಲದಲ್ಲಿ ಈ ದಾಸಕೂಟಕ್ಕೆ ಸೂರ್ಯೋದಯವಾದಂತಾಗಿ ಅವರ ಶಿಷ್ಯರಾದ ಶ್ರೀ ಪುರಂದರದಾಸರ ಕಾಲವೇ ಪ್ರಖರವಾದ ಮಧ್ಯಾಹ್ನವಾಗಿ ಪರಿಣಮಿಸಿತು.

ಈ ಪ್ರಕಾರ ವ್ಯಾಸಕೂಟಸ್ಥರಲ್ಲಿ ಅಗ್ರಗಣ್ಯರೆನಿಸಿ ದಾಸಕೂಟವನ್ನೂ ನಿರ್ಮಿಸಿದಂಥ-ಮಹಾಭಗವದ್ಭಕ್ತರಾಗಿ ರಾಜಾಧಿರಾಜರಿಂದಲೂ ಮನ್ನಣೆಯನ್ನು ಹೊಂದಿದಂಥ—ಕನ್ನಡಿಗರ ಮೇಲೆ ಮಹದುಪಕಾರಮಾಡಿ ಪ್ರಾತಃಸ್ಮರಣೀಯರಾದಂಥ ಪುಣ್ಯಪುರುಷರ ಹೆಸರನ್ನೇ ಕನ್ನಡಿಗರಾದ ನಾವು ಮರೆತುಬಿಟ್ಟಿರುತ್ತೇವೆಂದಮೇಲೆ ನಮ್ಮಂಥ ಅಘನುರೂ-ದುರ್ದೈವಿಗಳೂ-ಹೇಡಿಗಳೂ ಇನ್ನಾರಿದ್ದಾರು? ಈ ಮಹಾನುಭಾವರು ಬರೆದ ಕವನಗಳನ್ನೆಲ್ಲ ಕರ್ಣಾಟಕದ ಅಭಿಮಾನಿಗಳಲ್ಲಾರಾದರೂ ಒಟ್ಟುಗೂಡಿಸುವರಾದರೆ ಅದೊಂದು ಮಹಾಭಾರತದ ಹತ್ತುಮಡಿಯಷ್ಟು ಗ್ರಂಥವಾಗಬಹುದು. ಆದರೂ ನಿರ್ಲಜ್ಜರಾದ ಕನ್ನಡಿಗರು ನಾವು ಇಂಥ ಮಹಾತ್ಮರ ಹೆಸರನ್ನು ಉಚ್ಚರಿಸಲಿಕ್ಕೂ ನಾಚಿಕೊಂಡು ಅವರ ದಿವ್ಯಚರಿತಾಮೃತವನ್ನು ಪಾನ ಮಾಡಲಿಕ್ಕೆ ದೈವವಿಲ್ಲದವರಾಗಿ ಕಾಲುಮುರಿದ ಗುಬ್ಬಿಯಂತೆ ಇವರನ್ನು ಮೂಲೆಗುಂಪುಮಾಡಿ ಕೂಡ್ರಿಸಿ ಬಿಟ್ಟಿರುವೆವು. ದುರ್ಬಲರಾದ ಕನ್ನಡಿಗರಲ್ಲಿ ಇಂಥ ಮಹಾಪುರುಷರು ಜನಿಸಿದ್ದೇ ತಪ್ಪು. ದೇಶವೆಲ್ಲ ಅಪ್ರಕಾಶಿತ ವಸ್ತುವನ್ನು ಪ್ರಕಾಶಪಡಿಸಿ ತೋರಿಸಲಿಕ್ಕೆ ಹವಣಿಸುತ್ತಿರುವಾಗ ನಾವು ಸ್ವಪ್ರಕಾಶಕ ವಸ್ತುವನ್ನೇ ಪರಪ್ರಕಾಶವಾಗಿ ಮಾಡಲಿಕ್ಕೆ ಕಲಿತಿರುವೆವಲ್ಲ! ಕರ್ಣಾಟಕಸ್ಥರೆಂದು ಹೇಳಿಕೊಳ್ಳುವ ನಮಗೆ ಇದೆಷ್ಟು ನಾಚಿಕೆಗೇಡು! ಎಷ್ಟು ತಿರಸ್ಕಾರ! ಈ ಅಂಶವನ್ನೇ ಮನಸ್ಸಿನಲ್ಲಿ ತಂದು ಕರ್ನಾಟಕ

ಸತ್ಪುರುಷರ ಚರಿತ್ರೆಗಳಲ್ಲಿ ಕೆಲವನ್ನಾದರೂ ಸಾದ್ಯಂತವಾಗಿ ಸವಿಸ್ತಾರವಾಗಿ ಬರೆದು ಭಾಷಾಮಾತೆಯ ಸೇವೆಯನ್ನು ಅತ್ಯಲ್ಪವಾದರೂ ಮಾಡಬೇಕೆಂದು ಯೋಚಿಸಿ ಈ ಹೊತ್ತು ಶ್ರೀಪಾದರಾಜಗುರುಗಳ ಚರಿತ್ರವನ್ನೇ ಯಥಾಮತಿ ವಾಚಕರ ಮುಂದಿಡುವ ಸಾಹಸವನ್ನು ಮಾಡಿರುತ್ತೇವೆ.

## ಕಥಾರಂಭಃ

ಲಕ್ಷ್ಮೀವಕ್ಷಸುಕುಂಕುಮಾಂಕಿತಪದಾ ಲಕ್ಷ್ಮೀವಿಲಾಸಾಸ್ಪದಾ ।
ಲಕ್ಷ್ಮೀಅಕ್ಷಸುಪದ್ಮಪದ್ಮಿನಿಪ್ರಿಯಾ ಲಕ್ಷ್ಮೀಮನೋನಾಯಕಾ ॥
ಲಕ್ಷ್ಮೀಬಾಹುಲತಾಶ್ರಯಾ ಭುಜಯುಗಾಲಕ್ಷ್ಮೀಸದಾಲಿಂಗಿತಾ ।
ಲಕ್ಷ್ಮೀಚಿತ್ತಚಕೋರ ಪೂರ್ಣಉಡುಪಾಲಕ್ಷ್ಮೀಶ ತ್ವಂ ಪಾಹಿಮಾಂ ॥
(ಗುರುಗೋಪಾಲದಾಸರು)

ಪುಣ್ಯತಮವಾದ ಕಾವೇರೀ+ ನದಿಯ ತೀರದಲ್ಲಿ ಶ್ರೀರಂಗವೆಂಬುದೊಂದು

+ ಕಾವೇರೀ ವಿರಜಾಸೇಯಂವೈಕುಂಠಂರಂಗಮಂದಿರಂ ॥
ಸವಾಸುದೇವೋ ರಂಗೇಶಂ ಪ್ರತ್ಯಕ್ಷಂ ಪರಮಂಪದಂ ॥
ತ್ರಿರಾತ್ರಂ ಜಾಹ್ನವೀತೀರೇ ಪಂಚರಾತ್ರಂತುಯಾಮುನೇ ॥
ಸದ್ಯಃಪುನಂತು ಕಾವೇರೀ ಪಾತುಮಾಂ ಮರಣಾಂತಿಕಂ ॥
ಯಾಗತಿರ್ಯೋಗಯುಕ್ತಸ್ಯ ವಾರಾಣಸ್ಯಾಂಚತಾದೃಶೀ ॥
ಸಾಗರೇ ಸ್ನಾನಮಾತ್ರೇಣ ಕಾವೇರ್ಯಾಂ ಹರಿವಾಸರೆ ॥
ದೃಷ್ಟ್ವಾತು ಪಾಪಶಮನಂ ಸ್ಪೃಷ್ಟ್ವಾವ್ಯಾಧಿನಿವಾರಣಂ ॥
ಕಾವೇರೀವಂದನಾತ್ಪುಣ್ಯಂ ಕೈವಲ್ಯಂತು ಜಲಂಪಿಬನ್ ॥
(ಕಾವೇರೀ ಮಾಹಾತ್ಮ್ಯ)

ಇದನ್ನೇ ಶ್ರೀ ಪುರಂದರ ದಾಸರು ಕನ್ನಡ ಭಾಷೆಯಲ್ಲಿ ಎಷ್ಟು ಸುಂದರವಾಗಿ ಹೇಳಿದ್ದಾರೆ ನೋಡಿರಿ.

ರಾಗ— ತಾಳ,

ಕಾವೇರಿಯಭವಹಾರಿಯ|ದುರಿತಾದಿಯಮುಕ್ತಿಕಾರಿಯ ನೋಡುವಬನ್ನಿರಯ್ಯ|ಪ|
ಕಾಂತೆಯ ಹರಿಪದಜಾತೆಯ ಪರಮಪೂತೆಯ ಭುವನ ವಿಖ್ಯಾತೆಯ ಸು |
ಪ್ರೀತೆಯ ಹರಿಮುನಿಪ್ರೀತೆಯ ನುತಜನದಾತೆಯ ನೋಡುವ ಬನ್ನಿರಯ್ಯ ॥
ಗಂಗೆಯಮುನೆಗೆ ಹೋದರೆಮೂರೈದುದಿನಂಗಳಿಗೆ ಮುಕ್ತಿಯೆನ್ನುತಿಹರು|

ದಿವ್ಯವಾದ ಕ್ಷೇತ್ರವುಂಟು ಶ್ರೀರಂಗವೆಂಬ ನಾಮನಿರ್ದೇಶಮಾತ್ರ ದಿಂದಲೇ ಶ್ರೀರಂಗಪಟ್ಟಣವೆಂದು ವಾಚಕರು ಭ್ರಮೆಗೊಳ್ಳಕೂಡದು. ಪ್ರಾಚೀನಕಾಲದಲ್ಲಿ ಗೌತಮಕ್ಷೇತ್ರವೆಂದು ಹೆಸರಾದ, ಇತ್ತೀಚೆಗೆ ಮೈಸೂರ ಹುಲಿಯೆನಿಸಿಕೊಂಡ ಟೀಪುವಿನ ರಾಜಧಾನಿಯಾದ ಶ್ರೀರಂಗ ಪಟ್ಟಣವೇ ಬೇರೆ; ನಾವೀಗ ಹೇಳಲಿಕ್ಕೆ ಹೊರಟಿರುವ ಶ್ರೀರಂಗವೇ ಬೇರೆ. ಇವೆರಡೂ ಕಾವೇರೀ ತೀರದಲ್ಲಿಯೇ ಇದ್ದರೂ, ಶ್ರೀರಂಗಪಟ್ಟಣವು ಮೈಸೂರ ಡಿಸ್ಟ್ರಿಕ್ಟಿಗೆ ಸೇರಿದ್ದು; ಶ್ರೀರಂಗವಾದರೋ ಮದ್ರಾಸಾಧಿಪತ್ಯ ದಲ್ಲಿ ತ್ರಿಚನಾಪಲ್ಲಿಯ ಡಿಸ್ಟ್ರಿಕ್ಟಿಗೆ ಸೇರಿದೆ ಇವೆರಡೂ ಕ್ಷೇತ್ರಮಹಾ ತ್ಮ್ಯಗಳು ಸಕಲ ಪುರಾಣಸಾರಭೂತವಾದ ಹನ್ನೆರಡುಸಾವಿರ ಸಂಹಿತೆಗ ಳುಳ್ಳ ಬ್ರಹ್ಮಾಂಡಪುರಾಣದೊಳಗಿನ ಪುಣ್ಯಕ್ಷೇತ್ರ ಮಹಾತ್ಮ್ಯಖಂಡವೆಂ ಬುದರಲ್ಲಿ ಸಿಕ್ಕುವವು. ಅವುಗಳ ಸಾರಾಂಶವನ್ನೇ ತೆಗೆದು ರಂಗಾಚಾರ್ಯ, ಚಿಕ್ಕುಪಾಧ್ಯಾಯ, ಮಲ್ಲಿಕಾರ್ಜುನ, ತಿಮ್ಮ ಮುಂತಾದ ಕವಿವರ್ಯರು ಕರ್ಣಾಟಕ ಭಾಷೆಯಲ್ಲಿಯೂ ಅನೇಕ ಗ್ರಂಥಗಳನ್ನು ಬರೆದಿರುವರು.

ಶ್ರೀರಂಗವು ಭರತಖಂಡದ ಅನೇಕಾನೇಕ ಕ್ಷೇತ್ರಗಳಲ್ಲಿ ಅತ್ಯಂತ ಸುಪ್ರಸಿದ್ಧವಾದದ್ದು. ಭಕ್ತರ ಬಯಕೆಗಳನ್ನು ಪೂರೈಸುವಲ್ಲಿ ಭಕ್ತಕಲ್ಪ ತರುವೆನಿಸುವ ಶ್ರೀ ರಂಗನಾಥನೇ ಇಲ್ಲಿ ನೆಲಸಿರುವದರಿಂದಲೂ, ಭಾಗೀ ರಥೀ ಸದೃಶಳಾದ ಕಾವೇರಿಯು ಇದರೆಡೆಯಲ್ಲಿಯೇ ಪ್ರವಹಿಸುತ್ತಿರುವದ ರಿಂದಲೂ ಇದರ ಮಹತ್ವವು ಅತೀವವಾಗಿರುವದು. ಇಲ್ಲಿರುವ ದೇವಸ್ಥಾ ನದಷ್ಟು ವಿಶಾಲವಾದ ದೇವಸ್ಥಾನವು ಇಡೀ ಭರತಖಂಡದಲ್ಲಿಯೇ ಇಲ್ಲ ವೆಂದು ಹೇಳುತ್ತಾರೆ. ಈ ರಂಗನಾಥ ಮೂರ್ತಿಯು ಪೂರ್ವದಲ್ಲಿ ರಘು ವಂಶದ ಮಹಾರಾಜರ ಗೃಹಾರಾಧನ ಮೂರ್ತಿಯಾಗಿತ್ತೆಂತಲೂ ಮುಂದೆ

---

ಹಿಂಗದೆಕಾವೇರಿಯುನೋಡಿದಾಕ್ಷಣದಲಿ ಪಾತಕಗಳಿರದೋಡಿಹೋಗುವುದಯ್ಯ ||
ಯಾಗಾದಿಸ್ವರ್ಗವೋಕ್ಷಾದಿಯೆಷ್ಟೇಳ್‌ಕಾಶಿಯೊಳಾಗಲೆತನುವಬಿಡಲು ಮುಕುತಿ |
ಭೋಗಿಶಯನನ ದಿನದಲ್ಲಿ ಕಾವೇರಿಯುಹೋಗಿಮಿಂದರಿಗಂದೆಗತಿಯಹುದಯ್ಯ ||
ಕಂಡರೆಸಕಲಪಾಪವುಪರಿಹಾರಮಿಂದರೆಸಕಲದುಷ್ಕೃತಿ ದೂರ |
ಕೊಂಡಾಡಿದರೆಅನಂತಸುಕೃತನೀರುಂಡರೆ ಭವಬಂಧಮೋಕ್ಷವೈಯ್ಯ ||
ಅವಾವಜನ್ಮಕರ್ಮಂಗಳುಸವೆಯಲು ಕಾವೇರಿಯುಕಂಡು ಸುಖಿಯಾಗಿರೊ ||
ಶ್ರೀವಿಷ್ಣುಸ್ವಾಮಿಪುರಂದರವಿಠಲನ್ನ ಚರಣಸೇವೆಯೊಳಸುದಿನ ಇಷ್ಟುದಯ್ಯ ||

ವಿಭೀಷಣನು ಶ್ರೀರಾಮಚಂದ್ರನನ್ನು ಪ್ರಾರ್ಥಿಸಿ ಅದನ್ನು ತನ್ನ ರಾಜಧಾನಿಯಾದ ಲಂಕೆಗೆ ಸಾಗಿಸಿಕೊಂಡು ಹೋಗುತ್ತಿದ್ದಾಗ, ಮಾರ್ಗದಲ್ಲಿ ಪುಣ್ಯಮಯವಾದ ಶ್ರೀರಂಗಕ್ಷೇತ್ರವನ್ನು ಕಂಡು ರಂಗನಾಥನು ಅಲ್ಲಿಯೇ ಸ್ಥಿರವಾಗಿ ನಿಂತುಬಿಟ್ಟನೆಂತಲೂ ಇತಿಹಾಸವುಂಟು. ಹೀಗೆ ಕಕುತ್ಸ್ಥ ವಂಶದವರಿಗೆ ಕುಲಧನವಾದ ಶ್ರೀರಂಗನಾಥನು ವಾಸಮಾಡತಕ್ಕಂಥ ಶ್ರೀರಂಗಕ್ಷೇತ್ರವನ್ನು ಎಷ್ಟೆಂದು ಬಣ್ಣಿಸೋಣ! ನಮ್ಮ ಪೂರ್ವಾಚಾರ್ಯರಾದರೊ,

"ಶ್ರೀರಂಗಮಂಗಲಮಣಿಂಕರುಣಾನಿವಾಸಂ
ಶ್ರೀವೆಂಕಟಾದ್ರಿ ಶಿಖರಾಲಯಕಾಲಮೇಘಂ ॥
ಶ್ರೀಹಸ್ತಿಶೈಲಶಿಖರೋಜ್ವಲಪಾರಿಜಾತಂ
ಶ್ರೀಶಂನಮಾಮಿ ಶಿರಸಾಯದುಶೈಲದೀಪಂ" ॥

[ಶ್ರೀರಂಗ, ವೆಂಕಟಗಿರಿ, (ತಿರುಪತಿ), ಹಸ್ತಿಗಿರಿ, (ಕಂಚಿ), ಯದುಗಿರಿ (ಮೇಲುಕೋಟೆ) ]

ಎಂಬದಾಗಿ:—ಭರತಖಂಡದೊಳಗಿನ ಸಹಸ್ರಾರು ಕ್ಷೇತ್ರಗಳಲ್ಲಿ ಈ ನಾಲ್ಕೇ ಪ್ರಾಮುಖ್ಯವಾದುವೆಂದೂ, ಅದರಲ್ಲಿಯೂ ಶ್ರೀರಂಗವು ಮೊದಲನೆಯ ನಂಬರವೆಂದೂ ಸ್ತೋತ್ರ ಮಾಡಿರುವರು. ಅಂತೆಯೇ ಶ್ರೀಪಾದರಾಯರು—

ರಾಗ—ತೋಡಿ—ತಾಳ

ಕಂಗಳಿದ್ದತಕೋ | ಕಾವೇರಿ ರಂಗನ್ನ ನೋಡದಾ ॥ಪಲ್ಲ॥ ಜಗಂಗಳೊಳಗೆ
ಮಂಗಳಮೂರುತಿ | ರಂಗಯ್ಯ ಶ್ರೀಪಂದಗಳ ನೋಡದ ॥ ಅ. ಪ॥
ಹರಿಪಾದೋದಕಸಮಕಾವೇರಿ | ವಿರಜಾನದಿಯ ಸ್ನಾನಮಾಡಿ ॥
ವರವೈಕುಂಠಮಂದಿರದೊಳು | ಸಿರಿವಾಸುದೇವನ ನೋಡದ ॥ ೧ ॥
ಎಂದಿಗಾದರೊಮ್ಮೆ ಜನರು | ಬಂದು ಭೂಮಿಯಲ್ಲಿ ನಿಂದು ॥
ಛಂದವುಷ್ಕರಣಿಸ್ನಾನವ ಮಾಡಿ| ನಂದದಿಂದದೇವನ ನೋಡದ॥ ೨ ॥
ಹಾರಹೀರವೈಜಯಂತಿ | ತೋರಮುತ್ತಿನ ಪದಕವಿಟ್ಟು ॥
ತೇರನೇರಿ ಬೀದಿಲಿ ಬರುವ | ಶ್ರೀರಂಗವಿಠಲನ್ನ ನೋಡದ ॥ ೩ ॥

ಇಷ್ಟೊಂದು ಬಣ್ಣಿಸಿದ್ದಾರೆ. ಇವೆಲ್ಲವುಗಳ ಮೇಲಿಂದ ಈ ಕ್ಷೇತ್ರದ ಮಹತಿಯನ್ನು ಊಹಿಸಬಹುದಾಗಿದೆ. ಹಿಟ್ಟನ ಮೇಲೆ —

ಈ ಮಹೀಮಂಡಲದೊಳಿಪ್ಪ ತೀರ್ಥಕ್ಷೇತ್ರ| ನಾಮಗಳ ಕಾಲತ್ರಯ

ಗಳಲ್ಲಿ ಸ್ಮರಿಸುತಿಹ | ಧೀಮಂತರಾಗಾಮಿ ಸಂಚಿತಾಘೌಘಪರಿಹರಿಸಿ ದಾನಂತರದಲೀ|| ಸೂಮಾರ್ಗರುಳ್ಳನಕ ವಿವಿಧ ಭೋಗಗಳುಸು | ತ್ರಾಮಲೋಕದೊಳುಣಿಸಿ ಕರುಣಾಳು ಪ್ರಾಂತಕೆಸ್ವ | ಧಾಮಯ್ಯೆಗಿಸಿ ಪುಣ್ಯನ ಪಾಳ್ವನೆಕಂದೆಂದು ಸೂತ ಶೌನಕಗೆಪೇಳ್ದ ||

ಈ ಭರತ ಖಂಡದೊಳಗುಳ್ಳ ತೀರ್ಥಕ್ಷೇತ್ರ | ವೈಭವಾಬ್ಜ ಭವಾಂಡ ಪೌರಾಣದೊಳಗೆಹರಿ|ನಾಭಿ ಸಂಭವಪೇಳ್ದ ನಾರದನಿಗಿನಿತೆಂದುಪರಮ ಕಾರುಣ್ಯದಿಂದಾ || ಶ್ರೀಬಾಲಗೋವಿಪ್ರ ಮಾತಾಪಿತೃಗಳ ಧನ | ಲೋಭದಿಂದಲಿಕೊಂದ ಪಾತಕವು ಪರಿಹರಿಸಿ | ಶ್ರೀಭೂರಮಣ ಜಗನ್ನಾಥವಿಠ್ಠಲ ಪೊರೆವ ಬೇಡಿದಿಷ್ಟಾರ್ಥವಿತ್ತು ||

(ಪುಣ್ಯಕ್ಷೇತ್ರ ಮಹಾತ್ಮ್ಯ)

ಎಂಬದಾಗಿ ಪುಣ್ಯಕ್ಷೇತ್ರಗಳನ್ನು ಬಣ್ಣಿಸಿರುವ ಶ್ರೀಜಗನ್ನಾಥದಾಸರ ಹೇಳಿಕೆಯಂತೆ ಈ ಹೊತ್ತಿನ ದಿವಸ ನಮಗೂ-ನಮ್ಮ ವಾಚಕ ವರ್ಗಕ್ಕೂ ಶ್ರೀರಂಗದಂಥ ಕ್ಷೇತ್ರವನ್ನೂ-ಮಹಾತ್ಮಳಾದ ಕಾವೇರಿಯನ್ನೂ ನೆನಿಸುವ ಸುಯೋಗವು ಒದಗಿದ್ದು, ಆ ಶ್ರೀರಂಗವಿಠ್ಠಲ ಪದಾಂಕಿತ ಶ್ರೀಪಾದರಾಜರ ಪಾದಾನುಗ್ರಹವೆಂದೇ ಹೇಳಬೇಕಾಗುವದು. ಇರಲಿ.

ಇಂಥಾ ಪುಣ್ಯತಮವಾದ ಕ್ಷೇತ್ರದಲ್ಲಿ ಶೇಷಗಿರಿಯಪ್ಪನೆಂಬೊಬ್ಬ ಸಾತ್ವಿಕ ಬ್ರಾಹ್ಮಣನಿದ್ದತು. ಈತನೇನು ವಿಶೇಷವಾಗಿ ಕಲಿತವನಲ್ಲ. ಡಂಭಾಚಾರದವನೂ ಅಲ್ಲ. ದೇವರಲ್ಲಿ ಸಾತ್ವಿಕ ಭಕ್ತಿಯೊಂದನ್ನು ಮಾತ್ರ ಇಟ್ಟಿದ್ದನು. "ಶರೀರದಲ್ಲಿ ಪಿತ್ತವಿರಬೇಕು; ಸಂಸಾರದಲ್ಲಿ ವಿತ್ತವಿರಬೇಕು; ದೇವರ ಚರಣಾರವಿಂದದಲ್ಲಿ ಚಿತ್ತವಿರಬೇಕು." ಎಂಬದೊಂದು ನಾಣ್ಣುಡಿಯುಂಟಲ್ಲವೆ? ನಮ್ಮ ಶೇಷಗಿರಿಯಪ್ಪನಲ್ಲಿ ಮೊದಲಿನವೆರಡು ಅಷ್ಟಕಷ್ಟೇ ಇದ್ದರೂ, ಮೂರನೆಯದು ಮಾತ್ರ ಅದಾವ ಪೂರ್ವಾರ್ಜಿತ ಪುಣ್ಯದಿಂದಲೋ ಸಂಪೂರ್ಣವಾಗಿ ತುಂಬಿಕೊಂಡಿತ್ತು.

ದುರ್ಲಭಾವಿಪ್ರ ಗೋಷ್ಠೀಚ ದುರ್ಲಭಾ ಭಾರತೀಕಥಾ ||
ದುರ್ಲಭಾ ಹರಿಭಕ್ತಿಶ್ಚ ಗಂಗಾಸ್ನಾನಂಚ ದುರ್ಲಭಂ ||

ಎಂಬಂತೆ:—ಅತಿ ದುರ್ಲಭವಾದ ಭಕ್ತಿರಸಾಮೃತವು ಸರ್ವರಿಗೂ ಸಾಮಾನ್ಯವಾಗಿ ಸಿಕ್ಕತಕ್ಕದಲ್ಲ.

'ನರಾಣಾಂ ಕ್ಷೀಣಪಾಪಾನಾಂ ಹರೌಭಕ್ತಿಃ ಪ್ರಜಾಯತೇ' ||
(ಗರುಡಪುರಾಣ)

ಎಂಬ ರೀತಿಯಾಗಿ ಯಾರು ಅನನ್ಯ ಭಾವದಿಂದ ಭಗವಂತನನ್ನು ಸ್ತೋತ್ರ ಮಾಡಿ ಕ್ಷೀಣಪಾಪರಾಗಿರುವರೋ, ಅಂಥವರಿಗೆ ಮಾತ್ರ ಆತನಲ್ಲಿ ನೈಜ ವಾದ ಭಕ್ತಿಯುತ್ಪನ್ನವಾಗಬಹುದು. ಕ್ಷಣಕ್ಕೆ ಹದಿನೆಂಟು ಚಿತ್ತವುಳ್ಳ ನಮಗೆ ಅನನ್ಯ ಭಾವವೆಂದರೇನೋ, ದೇವರ ಸ್ತೋತ್ರವೆಂದರೇನೋ ಅದರ ಗುರುತೇ ಇಲ್ಲ. ನಾವು ಮಾಡುವದೆಲ್ಲವೂ ಶ್ರೀವಾದಿರಾಜ ಸ್ವಾಮಿ ಗಳವರು ಹೇಳಿದಂತೆ—

“ಮಂದಿಯ ಮುಂದೆ ದೇವರಸೇವೆ | ತುಳಸಿ | ಗಂಧಪುಷ್ಪವತಂದು ಯೇರಿಸುತಾ |
ಸಂದಣಿಆರೂ ಇಲ್ಲದಾಗ | ಸತಿ | ಕಂದನ ಮಲಮೂತ್ರವವಗುವೆ||
ಧನದಗೋಸುಗ ದೇವರಪೂಜೆ | ನಿತ್ಯ | ಮಣಿವಿಭೂಷಣಗಳ ವಿಳಸಿ ||
ಜನರುಆರುಇಲ್ಲದಾಗ | ಪರರ | ಬಿನುಗುನುಡಿವುತ್ತ ಮಲಗುವೆನೊ”||

ಕೇವಲ ಡಂಭಾಚಾರ, ಮಂದಿಗೆ ಟೊಪ್ಪಿಗೆ ಹಾಕುವ ಮಾರ್ಗ. ಇನ್ನೊಂದಿಲ್ಲ. ಇದೆಲ್ಲವೂ ಈ ಇಪ್ಪತ್ತನೆಯ ಶತಮಾನದ ನವನವೀನ ಶಿಕ್ಷಣ ಪದ್ಧತಿಯ ಪರಿಣಾಮವೋ ಅಥವಾ ನಮ್ಮ ದುರದೃಷ್ಟವೋ ತಿಳಿಯದು! ಶೇಷಗಿರಿಯಪ್ಪನಂತೂ ಈ ವರ್ಗದವನಾಗಿರಲಿಲ್ಲ. ಸಾಧ್ವೀ ಶಿರೋಮಣಿ ಗಿರಿಯಮ್ಮನೆಂಬವಳು ಈತನಿಗೆ ತಕ್ಕ ಹೆಂಡತಿಯಾಗಿದ್ದಳು. ಈ ಗಿರಿಯಮ್ಮನ ಅಕ್ಕನನ್ನೇ ಕಣ್ವನದೀ ತೀರದಲ್ಲಿ ಪ್ರಸಿದ್ಧವಾದ ನೃಸಿಂಹ ಕ್ಷೇತ್ರದೊಳಗಿರುವ ರಾಮಾಚಾರ್ಯರೆಂಬವರಿಗೆ ಕೊಟ್ಟಿತ್ತು. (ಈಗಳ ಮೈಸೂರಾಧಿಪತ್ಯದಲ್ಲಿ ಚನ್ನಪಟ್ಟಣ ತಾಲೂಕಿಗೆ ಸೇರಿದ ಹಿಂದಾನೊಂದು ಗ್ರಾಮಕ್ಕೆ ಪೂರ್ವದಲ್ಲಿ ನೃಸಿಂಹ ಕ್ಷೇತ್ರವೆನ್ನುತ್ತಿದ್ದರು.) ಅಕ್ಕತಂಗಿಯ ರಿಬ್ಬರೂ ಕೇವಲ ಪತಿಪರಾಯಣರು. ಸತ್ಕುಲಪ್ರಸೂತರು. ದೇವಾಂಶ ಸಂಭೂತರು. ಇಂಥಾ ಸ್ತ್ರೀರತ್ನಗಳೆರಡೂ ನಮ್ಮ ಕರ್ಣಾಟಕದ ಖನಿ ಯಲ್ಲಿಯೇ ಜನಿಸಿ, ಕರ್ಣಾಟಕ ಮಹಾರಾಜರ ಭಂಡಾರದಲ್ಲಿ ಪೂಜಿತಗಳಾಗಿ, ಕರ್ಣಾಟಕದ ಭಾವೀ ಭಾಗ್ಯೋದಯಕ್ಕೆ ಕಾರಣವಾದವೆಂಬುದನ್ನು ಪ್ರತಿಯೊಬ್ಬ ಕನ್ನಡಿಗನೂ ತನ್ನ ಹೃತ್ಪಟಲದಲ್ಲಿ ಕೊರೆದಿಡತಕ್ಕದ್ದು.

ಅಂದರೆ—ಹಿರಿಯಳಲ್ಲಿ ಬ್ರಹ್ಮಣ್ಯತೀರ್ಥ*ರೆಂಬ ಮಹಾತ್ಮರೂ (ಶ್ರೀವ್ಯಾಸರಾಯರ ಗುರುಗಳು), ಕಿರಿಯಳಲ್ಲಿ (ಗಿರಿಯಮ್ಮನಲ್ಲಿ) ಶ್ರೀಪಾದರಾಜರೆಂಬ ಮಹನ್ನೀಯರೂ ಜನಿಸಿ ಕನ್ನಡಿಗರ ರಾಜ್ಯವನ್ನೂ-ಕನ್ನಡಿಗರ ಸಾಹಿತ್ಯವನ್ನೂ ಹೆಚ್ಚಿಸಿ, ಸರ್ವಾಂಶದಿಂದಲೂ ಕನ್ನಡಿಗರನ್ನು ಮುಂದಕ್ಕೆ ತಂದರು. ಅದೆಲ್ಲವೂ ಮುಂದೆ ಕ್ರಮಾನುಸಾರವಾಗಿ ಚರಿತ್ರದಲ್ಲಿ ಬರೆಯಲ್ಪಡುವದು. ಇರಲಿ.

ಈ ಉಭಯ ದಂಪತಿಗಳೂ ಕೇವಲ ಸಾತ್ವಿಕರಾಗಿ ಆ ದೇಶದ ಪದ್ಧತಿಯಂತೆ ಮನೆಯ ಹತ್ತಿರವೇ ಒಂದು ತೋಟವನ್ನು ಮಾಡಿಕೊಂಡು ಅದರಿಂದ ಕಾಲಕ್ಷೇಪವನ್ನು ಸಾಗಿಸುತ್ತಿದ್ದರು. ಆ ದೇಶದಲ್ಲಿ ಇವರಿಗೆ

---

* ಬ್ರಹ್ಮಣ್ಯತೀರ್ಥರು—ನೃಸಿಂಹಕ್ಷೇತ್ರದಲ್ಲಿರುವ ರಾಮಾಚಾರ್ಯರೆಂಬವರಿಗೆ-ನರಸಿಂಹಾಚಾರ್ಯರು ಮಕ್ಕಳಾದರು. ಇವರನ್ನು ಉಪನಯನವಾದ ಕೂಡಲೆ ಅಬ್ಬೂರ ಹತ್ತರವಿರುವ ಪ್ರವಸ್ಯಪಲ್ಲಿಗಳ ಗುಹೆಯಲ್ಲಿದ್ದ ಪುರುಷೋತ್ತಮತೀರ್ಥರಲ್ಲಿ ವ್ಯಾಸಂಗಕ್ಕಿಟ್ಟರು. ಮುಂದೆ ಅವರಿಗೆ ಸ್ವಪ್ನವಾಗಿ ಈ ನರಸಿಂಹಾಚಾರ್ಯರಿಗೇ ಸಂಸ್ಥಾನವಾಯಿತು. ಇವರೇ ಬ್ರಹ್ಮಣ್ಯತೀರ್ಥರು. ಬಾಲ್ಯದಿಂದಲೂ ಬ್ರಾಹ್ಮಣರಲ್ಲಿ ಬಹಳ ಭಕ್ತಿಯುಳ್ಳವರಾದ್ದರಿಂದ ಇವರಿಗೆ ಈ ಹೆಸರಿಟ್ಟರು. ಪುರುಷೋತ್ತಮತೀರ್ಥರು ಶಾ. ಶಕೆ ೧೩೫೭ನೇ ರಾಕ್ಷಸಸಂವತ್ಸರದ ಆಶ್ವೀಜ ಶುದ್ಧ ೭ರಿಂದ ೧೩೬೪ನೇ ದುಂದುಭಿ ಸಂವತ್ಸರದ ಮಾಘ ಶು|| ೫ ರವರೆಗೆ ಸಂಸ್ಥಾನ ಆಳಿದರು.

ಬ್ರಹ್ಮಣ್ಯತೀರ್ಥರ ಸ್ವಪ್ನದಲ್ಲಿ ದೇವರು ಬಂದು ಹೇಳಿದ ಮೇರೆಗೆ ಅವರು ಗುಹೆಯ ಹತ್ತರ ಭೂಮಿಯಲ್ಲಿ ಅಗಿಸಿ ಅಲ್ಲಿ ಸಿಕ್ಕ ವಿಠ್ಠಲದೇವರನ್ನು ಸಂಸ್ಥಾನದಲ್ಲಿಟ್ಟು ಪೂಜಿಸಹತ್ತಿದರು.

ಇವರು-ಗ್ರಂಥಗಳನ್ನು ಬರೆದಂತೆ ಕಾಣಲಿಲ್ಲ. ಕೇವಲ ತಪೋನಿಷ್ಠರಾಗಿ ಶಾ. ಶಕೆ ೧೩೬೪ನೇ ದುಂದುಭಿ ಮಾಘ ಶುದ್ಧ ೫ರಿಂದ ೧೩೮೯ನೇ ಸರ್ವಜಿತು ವೈಶಾಖ ವದ್ಯ ೧೨ರ ವರೆಗೆ ಸಂಸ್ಥಾನವಾಳಿದರು.

'ಸೇವೇಬ್ರಹ್ಮಣ್ಯ ಭಾಸ್ಕರಂ' ಎಂದು ಶ್ರೀ ವ್ಯಾಸರಾಯರು ಇವರನ್ನು ಸ್ತುತಿಸಿರುವದರಿಂದ ಇವರು ಸೂರ್ಯಾಂಶರೆಂದು ಗೊತ್ತಾಗುವದು.

(ಮಾಧ್ವಮುನಿವೃಂದಚರಿತ್ರ)

'ತೋಟಂತಿಲ್ಲಾಯ' ಅಂದರೆ ತೋಟದ ಮನೆಯವರು ಅಥವಾ ತೋಟದ ತಿಗುಳರು ಎಂದು ಕರೆಯುತ್ತಿದ್ದರು.

ತೋಟಂತಿಲ್ಲಾಯವೆಂದರೆ ವೈಷ್ಣವ ಬ್ರಾಹ್ಮಣರಲ್ಲಿಯೇ ಒಂದು ಭೇದವಾಗಿರುವದು, ಶ್ರೀಮದಾಚಾರ್ಯರ ವಿದ್ಯಾಗುರುಗಳಾದ ತುಳುವ ವಂಶದವರಿಗೂ ಇದೇ ಹೆಸರಿತ್ತು. ನಾವು ಮೇಲೆ ಹೇಳಿದ ರಾಮಾಚಾರ್ಯರು (ಗಿರಿಯಮ್ಮನ ಅಕ್ಕನಗಂಡ) ಇದೇ ತುಳವವಂಶೀಯರು. ಇವರಿಗೆ 'ಪೂಗವನಾನ್ವಯಜ'ರೆಂಬ ಹೆಸರಿದ್ದಂತೆ ಶ್ರೀ ಬ್ರಹ್ಮಣ್ಯತೀರ್ಥರ ಚರಿತ್ರವನ್ನು ಸಂಗ್ರಹಿಸಿದ ಪುರಾತನವಾದ ಒಂದು ಶ್ಲೋಕದಿಂದ ತಿಳಿಯಬರುತ್ತಿರುವದು—

ಜಾತೋಭಾಸ್ಕರಏವ ಪೂಗವನಜಾದ್ರಾಮಾನ್ನೃಸಿಂಹಾಖ್ಯಯಾ |
ಸೋಪಿಶ್ರೀಪುರುಷೋತ್ತಮಾದ್ಯತಿರಭೂದ್ಬ್ರಹ್ಮಣ್ಯತೀರ್ಥಾಭಿದಃ ||

.... .... .... .... .... ....

(ಪೂಗವನಾನ್ವಯಜ ಬ್ರಾಹ್ಮಣರಾದ ರಾಮಾಚಾರ್ಯರಿಗೆ ನರಸಿಂಹಾಚಾರ್ಯರೆಂಬ ಮಕ್ಕಳು ಹುಟ್ಟಿ ಪುರುಷೋತ್ತಮ ತೀರ್ಥರಿಂದ-ಬ್ರಹ್ಮಣ್ಯತೀರ್ಥರೆಂಬ ಅಭಿಧಾನವನ್ನು ಪಡೆದರು.)

ಮಧ್ವವಿಜಯದಲ್ಲಾದರೂ--'ಪೂಗವನಾನ್ವಯಜೋದ್ವಿಜಃ' ಎಂದು ಉಕ್ತವಾಗಿರುವದು. ಈ ಪಂಚದ್ರಾವಿಡ ಬ್ರಾಹ್ಮಣರಲ್ಲಿ ಸೇರಿದ ಪೂಗವನಾನ್ವಯಜಬ್ರಾಹ್ಮಣರಿಗೇನೇ ಅಪಭ್ರಷ್ಟ ಭಾಷೆಯಲ್ಲಿ(ತುಳುಭಾಷೆಯಲ್ಲಿ) ತೋಟಂತಿಲ್ಲಾಯ ಎಂದು ಹೇಳುತ್ತಾರೆಂಬದಾಗಿ ಶ್ರೀ ನಾರಾಯಣ ಪಂಡಿತಾಚಾರ್ಯರು-ಭಾವದೀಪಪ್ರಕಾಶದಲ್ಲಿಯೂ-ಮತ್ತೆ ಕೆಲವು ಮಧ್ವವಿಜಯ ವ್ಯಾಖ್ಯಾನಕಾರರೂ ಬರೆದಿದ್ದಾರೆ. 'ನಡ್ಡಂತಿಲ್ಲಾಯ' ಅಂದರೆ ನಡುಮನೆಯ ಭಟ್ಟ (ಮಧ್ಯಮಂದಿರ) ಎಂಬ ಹೆಸರು ಬಂದ ಹಾಗೆಯೇ ತೋಟಂತಿಲ್ಲಾಯ ಎಂಬ ಹೆಸರು ಬಂದಿದೆ. ಹೀಗೇವೇ ತ್ರಿವಿಕ್ರಮಪಂಡಿತಾಚಾರ್ಯರೇ (ಕವಿತ್ವ-ವೇದ-ವೇದಾಂಗ ಈ ಮೂರರಲ್ಲಿಯೂ ಹೆಚ್ಚೀ ಸಾಮರ್ಥ್ಯವುಳ್ಳವರಾದ್ದರಿಂದ ತ್ರಿವಿಕ್ರಮ ಪಂಡಿತಾಚಾರ್ಯರೆಂಬ ಹೆಸರು ಬಂತು.) ಮೊದಲಾದವರ ಕುಲಗಳಿಗೆ 'ಪೆಜತ್ತಾಯ'-'ಕುಂಜತ್ತಾಯ' ಎಂಬ ಹೆಸರುಗಳು ಈಗ್ಯೂ ತುಳುವರಲ್ಲಿ ಪ್ರಸಿದ್ಧವಿರುವವು.

ಇಂತು ಸಾತ್ವಿಕ ಶಿರೋಮಣಿ ಗಿರಿಯಮ್ಮನ ಹೊಟ್ಟೆಯಲ್ಲಿ ದೇವತಾನುಗ್ರಹದಿಂದ ಒಂದು ಗಂಡು ಮಗುವು ಹುಟ್ಟಿತು. ಮಕ್ಕಳು-ಮರಿಗಳಿಗೆ ದೇವರ ಹೆಸರನ್ನೋ-ಪುಣ್ಯಕರವಾದ ತೀರ್ಥಕ್ಷೇತ್ರದ ಹೆಸರನ್ನೋ ಇಟ್ಟು ಕರೆಯುವದೊಂದು ನಮ್ಮ ಪ್ರಾಚೀನಾರ್ಯರ ಪದ್ಧತಿ. ಅದರಿಂದ ಅನಾಯಾಸವಾಗಿ ದೇವರನ್ನೂ ತೀರ್ಥಕ್ಷೇತ್ರವನ್ನೂ ಸ್ಮರಿಸಿದಂತಾಗುವದೆಂದು ಅವರ ಅಭಿಪ್ರಾಯವಾಗಿದ್ದಿತು. ನಾಗರಿಕತೆಯು ಈಗಿನ ಕಾಲದಲ್ಲಾದರೋ ಪಾಶ್ಚಾತ್ಯ ಶಿಕ್ಷಣವನ್ನು ಪಡೆದು ಪಾಶ್ಚಾತ್ಯ ಸಂಸ್ಕೃತಿಯನ್ನೇ ಅನುಸರಿಸುತ್ತ ಬಂದ ನಾವು ಇದೆಲ್ಲವೂ ಮೂಢಭಾವನೆಯೆಂತಲೂ ಅನಾಗರಿಕತೆಯೆಂತಲೂ ಭಾವಿಸಿ ವಸಂತ, ಮನೋಹರ, ಮೇರು, ಕುಸುಮಾ ಚಂಪಾ ಇತ್ಯಾದಿ ಏನೇನೋ ತರತರದ ಹೆಸರುಗಳನ್ನಿಟ್ಟು ಅಕ್ಕರದಿಂದ ಕರೆಯುತ್ತಿರುವೆವು. ನೋಡಿದಿರೋ! 'ಕಲೌ ಗೋವಿಂದ ಕೀರ್ತನಂ' ಎಂಬಂತೆ ಕಲಿಯುಗದಲ್ಲಿ ದೇವರ ಧ್ಯಾನವೇ ಮುಖ್ಯವಾದುದಲ್ಲವೇ? ನಮ್ಮ ಪೂರ್ವಜರು ಮನುಷ್ಯಪ್ರಾಣಿಗೆಂತೂ ಇರಲಿ, ಮನೆಯಲ್ಲಿ ಸಾಕುವ ಆಕಳು ಮುಂತಾದ ಪಶುಗಳಿಗೂ ಸಹ ಗಂಗೆ-ತುಂಗೆ-ಯಮುನೆ ಇತ್ಯಾದಿ ಹೆಸರಿಟ್ಟು ಮಾನುಷ ಜನ್ಮದ ಸಾರ್ಥಕತೆಯನ್ನುಂಟುಮಾಡಿಕೊಂಡಿರಲು, ಅವರ ವಂಶಜರೆಂದೇ ಹೇಳಿಕೊಳ್ಳುವ ನಾವು ಪರ್ಯಾಯದಿಂದ ಕೂಡಾ ಹಾಗೆ ಉಚ್ಚರಿಸಲು ನಾಚಿಕೆಪಡುತ್ತಿರುವೆವಲ್ಲಾ! ಅಯ್ಯೋ! ಇದಕ್ಕಿಂತಲೂ ಶೋಚನೀಯವಾದುದಿನ್ನೇನು? ಹೀಗೆ ನಾವು ದೇವರನ್ನೂ-ಹಿರಿಯರನ್ನೂ ಹಿಂದೂಡುತ್ತ ಬಂದಿರುವದರಿಂದಲೇ ಅವರೂ ನಮ್ಮನ್ನೂ ಹಿಂದಿರಿಸ ಹತ್ತಿದರು. ಇನ್ನಾದರೂ ಎಚ್ಚರಾಗಿ ಮೊದಲಿನಂತೆ ಮುದ್ದು ಮುದ್ದಾದ ದೇವರ ಹೆಸರನ್ನಿಟ್ಟು ಮಕ್ಕಳನ್ನು ಮುದ್ದಿಸೋಣ! ಗೋರಕ್ಷಣೆಯಲ್ಲಿ ಆಸಕ್ತರಾಗೋಣ! ಅಂದರೆ ದೇವರು ಪ್ರೀತನಾಗುವನು. ಒಲಿಯುವನು. ಅಸ್ತು.

ಶೇಷಗಿರಿಯಪ್ಪನಾಗಲಿ, ಗಿರಿಯಮ್ಮನಾಗಲಿ ಇಬ್ಬರೂ ನಮ್ಮ ವರ್ಗದವರಲ್ಲ. ಅವರು ಸುಮಾರು ಮುನ್ನೂರು-ನಾನೂರು ವರ್ಷಗಳ ಹಿಂದಿನ ಕಾಲದವರು. ಆಗ ಇಂಥ ಹುಚ್ಚು ಚಾಳಿಗಳಿರಲಿಲ್ಲ. ಪದ್ಧತಿಯಂತೆ ಹನ್ನೆರಡನೆಯ ದಿವಸ ತಮ್ಮ ಮಗುವಿಗೆ 'ಲಕ್ಷ್ಮೀನಾರಾಯಣ'ನೆಂಬ ಹೆಸರಿಟ್ಟರು. ಅಹಾ! ಲಕ್ಷ್ಮೀನಾರಾಯಣನೆಂಬ ನಾಮವು ಎಷ್ಟು ಮನೋಹರವಾಗಿರುವದು? ಎಷ್ಟು ಮುದ್ದಾಗಿರುವದು? ಆರಂಭದಲ್ಲಿಯೇ ಇಂಥಾ

ಮುದ್ದುಹೆಸರಿನಿಂದ ಕರೆಯಲ್ಪಟ್ಟ ಮಗುವು ಮುಂದೆ ಲೋಕಕ್ಕೆ ಮುದ್ದಾಗುವದರಲ್ಲಿ ಸಂದೇಹವೇನು? ಅದೆಲ್ಲ ಮುಂದಿನ ಚರಿತ್ರೆಯಿಂದ ವಾಚಕರಿಗೆ ತಾನೇ ತಿಳಿಯುವದು.

ಮಗುವು ಕಡೆತನಕ ಮಗುವಾಗಿಯೇ ಇರುವದಿಲ್ಲ. ಅದು ದಿನ ದಿನಕ್ಕೆ ಬಳೆಯ ಹತ್ತುವದು. ಅದರಂತೆ ನಮ್ಮ ಲಕ್ಷ್ಮೀನಾರಾಯಣನಾದರೂ ಅಂಬೆಗಾಲಿಟ್ಟು ಆಡಹತ್ತಿದನು. ಮೆಲ್ಲಮೆಲ್ಲನೆ ತಪ್ಪು ಹೆಜ್ಜೆಗಳನ್ನೂ ಇಡಹತ್ತಿದನು. ಒಂದೊಂದೇ ತೊದಲು ಮಾತುಗಳನ್ನಾಡುವನು. ಮಗುವಿನ ಬಾಲಲೀಲಾವಿನೋದದಿಂದ ತಾಯಿ-ತಂದೆಗಳು ಆನಂದಪರವಶರಾಗಿ ಹೋಗುತ್ತಿದ್ದರು. ಅವರಿಗೆ ತೋಟದ ಶ್ರಮದ ಕೆಲಸವೂ ಸಹ ಶ್ರಮವೆನಿಸುತ್ತಿದ್ದಿಲ್ಲ. ಕೆಲಸ ಮಾಡಿ ಮಾಡಿ, ದಣಿದು ಬಂದ ತಂದೆ-ತಾಯಿಗಳಿಗೆ ಇದೊಂದು ಮನೋಹರವಾದ ಪಾನೀಯ! ಅಮೃತ ಕಲಶ!! ಅಮೃತ ಪಾನಮಾಡುವ ದೇವತೆಗಳಂತೆ ಮಗುವಿನ ಲೀಲಾರೂಪವಾದ ಅಮೃತವನ್ನು ಪಾನಮಾಡಿ ತಾಯಿತಂದೆಗಳು ಹಿರಿ ಹಿರಿ ಹಿಗ್ಗುತ್ತಿದ್ದರು. ಹೀಗೆ ಹಿರಿಯರನ್ನು ಆನಂದಪಡಿಸುತ್ತಿದ್ದ ಲಕ್ಷ್ಮೀನಾರಾಯಣನು ನಾಲ್ಕಾರು ವರ್ಷದವನಾದನು. ಆ ಕಾಲದಲ್ಲಿ ಈಗಿನಂತೆ ಹಳ್ಳಿಹಳ್ಳಿಗೆ ಪಾಠಶಾಲೆಗಳಿರಲಿಲ್ಲ. ಸಕ್ತಿಯ ಶಿಕ್ಷಣವೆಂದರೇನೋ ಗೊತ್ತೇ ಇರಲಿಲ್ಲ. 'ಗುರುಶುಶ್ರೂಷಯಾ ವಿದ್ಯಾ' ಎಂಬಂತೆ ಗುರುಸೇವೆ ಮಾಡಿಯೇ ವಿದ್ಯೆ ಸಂಪಾದಿಸಬೇಕಾಗಿತ್ತು. ಪ್ರಾಚೀನ ಪದ್ಧತಿಗೂ ಅರ್ವಾಚೀನ ಪದ್ಧತಿಗೂ ಅಜಗಜಾಂತರವಾಗಿರುವದು. ಈಗ ಅದನ್ನೆಲ್ಲ ಹೇಳುತ್ತ ಕುಳಿತರೆ ಅದೊಂದು ದೊಡ್ಡ ಕಾದಂಬರಿಯೇ ಆಗಬಹುದು. ಒಟ್ಟಿನ ಮೇಲೆ—ಗುರು-ಶಿಷ್ಯ ಸಂಬಂಧವು ಕಡೆತನಕ ಸ್ಥಿರವಾಗಿ ಉಳಿದು ನಿಜವಾದ ವಿದ್ಯಾಲಾಭವು ದೊರಕಲಿಕ್ಕೆ ಪ್ರಾಚೀನ ಪದ್ಧತಿಯೇ ಶ್ರೇಷ್ಠತರವಾಗಿತ್ತೆಂದು ಒಂದೇ ಮಾತಿನಲ್ಲಿ ಹೇಳಿಬಿಡುವೆವು. ಆದರೆ—ಅರ್ವಾಚೀನ ಪದ್ಧತಿಯನ್ನು ದ್ವೇಷಿಸುವೆವೆಂದು ವಾಚಕರು ತಿಳಿಯಕೂಡದು. ಮುಖ್ಯವಾಗಿ ಸ್ವಾತಂತ್ರ್ಯಪ್ರೀತಿ, ಸ್ವದೇಶಾಭಿಮಾನ ಇತ್ಯಾದಿ ಉಜ್ವಲ ಗುಣಗಳು ನಮ್ಮಲ್ಲಿ ಒಡಮೂಡಲು ಹಳೇಪದ್ಧತಿಯೇ ಮೇಲಾಗಿತ್ತೆಂದು ನಮಗೆ ಅನಿಸುತ್ತಿರುವದು. ಅದು ಹೇಗೇ ಇರಲಿ, ಶೇಷಗಿರಿಯಪ್ಪನೂ, ಗಿರಿಯಮ್ಮನೂ ತಮ್ಮ ಚಿಕ್ಕ ಮಗುವಾದ ಲಕ್ಷ್ಮೀನಾರಾಯಣನನ್ನು ಗುರು

ಗಳಲ್ಲಿಟ್ಟು ವಿದ್ಯೆಕಲಿಸದೆ ಆಗಲೇ ದನ ಕಾಯಲಿಕ್ಕೆ ಹಚ್ಚಿಬಿಟ್ಟರು! ಇದಕ್ಕೆ ಕಾರಣವೇನೋ ನಮಗೆ ತಿಳಿಯದು. ಈತನಿಗೆ ತಕ್ಕ ಗುರುಗಳು ಸಿಕ್ಕಲಿಲ್ಲವೋ? ಅಥವಾ ತಂದೆತಾಯಿಗಳಿಗೆ ವಿದ್ಯಾಭ್ಯಾಸವೇ ಬೇಕಾಗಿರಲಿಲ್ಲವೋ? ಇನ್ನೇನು ದಾರಿದ್ರ್ಯದ ದೆಸೆಯಿಂದ ಕಲಿಸಲಿಕ್ಕಾಗಲಿಲ್ಲವೋ? ಬೇರೆ ಕಾರಣಗಳೇನಾದರೂ ಇದ್ದವೋ? ಅಂತೂ ಲಕ್ಷ್ಮೀನಾರಾಯಣನು ಈಗ ದನಕಾಯುವ ಹುಡುಗ. ಚುಮು ಚುಮು ನಸುಕು ಹರಿಯುತ್ತಲೇ ಈತನು ಮನೆಯೊಳಗಿನ ಎಮ್ಮೆ-ಆಕಳು-ಕರುಗಳನ್ನು ಹೊಡಕೊಂಡು ಅಡವಿಗೆ ಹೋಗುವನು. ದನಗಳೆಲ್ಲ ಚನ್ನಾಗಿ ಮೇದು ಕಾವೇರಿಯ ತಿಳಿನೀರನ್ನು ಕುಡಿದು, ಆನಂದದಿಂದ ಜಿಗಿಯುತ್ತ-ಓದರುತ್ತ ಮನೆಯ ಹಾದೀ ಹಿಡಿಯಲು, ತಾನೂ ಮನೆಗೆ ಬರುವನು. ಮಧ್ಯಾಹ್ನದ ಊಟವಾದೊಡನೆಯೇ ಮತ್ತೂ ಇದೇ ಉದ್ಯೋಗ. ಬರಬರುತ್ತ ಈತನಿಗೆ ಅನೇಕ ದನಕಾಯುವ ಹುಡುಗರು ಸಂಗಾತಿಗಳಾಗಿ ಕೂಡಿದರು. ಅದೊಂದು ದೊಡ್ಡ ಜಂಗುಳಿಯೇ ಆಯಿತು. ಎಲ್ಲರಿಗೂ ಲಕ್ಷ್ಮೀನಾರಾಯಣನೇ ಅಗ್ರಣಿ. ಈತನು ಹೇಳಿದಂತೆ ಎಲ್ಲರೂ ಕೇಳತಕ್ಕವರು. ಆಗ ಲಕ್ಷ್ಮೀನಾರಾಯಣನು ದನಕಾಯುವ ಹುಡುಗರನ್ನು ಕೂಡಿಕೊಂಡು ಅಡವಿಯಲ್ಲಿಯೇ ಬಗೆಬಗೆಯ ಆಟಗಳನ್ನಾಡುವನು. ಪ್ರತಿಯೊಂದರಲ್ಲಿಯೂ ಈತನ ಚುರುಕುಬುದ್ಧಿಯು ಒಡೆದು ಕಾಣುತ್ತಿತ್ತು. ಅದರಿಂದ ಎಲ್ಲರೂ ಈತನನ್ನೇ ತಮ್ಮ ಮುಂದಾಳಾಗಿ ಮಾಡಿಕೊಂಡಿದ್ದರು. ಇದನ್ನೆಲ್ಲ ನೆನೆಸಿದರೆ— ಹಿಂದಕ್ಕೆ ಯಮುನಾತೀರದಲ್ಲಿ ಗೋಗಳನ್ನು ರಕ್ಷಿಸಿದ ಬಾಲಗೋಪಾಲಮೂರ್ತಿ ಶ್ರೀಕೃಷ್ಣನ ಕಥೆಯೇ ಕಣ್ಣು ಮುಂದೆ ಕಟ್ಟಿದಂತಾಗುವದು. ಭೋ ಕೃಷ್ಣಾ! ವಾಸುದೇವಾ! ನೀನು ನಿಜವಾಗಿಯೂ ಲಕ್ಷ್ಮೀನಾರಾಯಣ. ನಮ್ಮ ಗಿರಿಯಮ್ಮನ ಮಗನಾದರೋ ಹೆಸರಿಗೆ ಲಕ್ಷ್ಮೀನಾರಾಯಣ.

'ಹೆಸರು ಹಾಲಯ್ಯ ನೆರೆದುಣ್ಣುದಂಬಲಿ ಮೆಂದು|'

(ಹೆಸರೇನೋ ಹಾಲಪ್ಪನೆಂದು, ಉಣ್ಣುವದು ಅಂಬಲಿ ಮಜ್ಜಿಗಿ) ಎಂಬ ಹಾಗೆ ಈತನು ಹೆಸರಿನಿಂದಲೇ ಶ್ರೀಮಂತ; ಮನೆಯಲ್ಲಿ ಮೂರು ಕಾಸೂ ಇಲ್ಲ. ಆದರೇನು? ಏಕಾಂತಭಕ್ತಿಯಿಂದ ದ್ರೌಪದಿಯು ಕೂಗಿಕೊಂಡಂತೆ:-

"ಹಾ ಕೃಷ್ಣದ್ವಾರಕಾ ವಾಸಿನ್ ಕ್ವಾಸಿಯಾದವನಂದನ ||
ಇಮಾಮವಸ್ಥಾಂ ಸಂಪ್ರಾಪ್ತಾಮನಾಥಾಂ ಕಿಮುಪೇಕ್ಷ್ಯಸೆ ||"

ಎಂಬದಾಗಿ ಈತನು ಹಗಲಿರಳೂ ನಿನ್ನನ್ನು ಬೇಡಿಕೊಳ್ಳುತ್ತಿರುವನು. ತಂಗಿ ದ್ರೌಪದಿಗೆ ಅಕ್ಷಯ್ಯವಸ್ತ್ರವನ್ನಿತ್ತು ಅಭಿಮಾನವನ್ನು ಕಾಯ್ದ ಹಾಗೆ, ಈತನ ಅಭಿಮಾನಿ ದೇವತೆಯಾದರೂ ನೀನೇ ಆಗಿರುವೆಯಲ್ಲವೇ? ನಿನಗೆ ಕೋಟ್ಯಂತರ ನಮಸ್ಕಾರಗಳಿರಲಿ.

ಲಕ್ಷ್ಮೀನಾರಾಯಣನು ಹೀಗೆ ದನಕಾಯುವ ಹುಡುಗನಾಗಿ ಸ್ವಚ್ಛಂದದಿಂದ ಇರುತ್ತಿರುವಾಗ ಅದೇನು ಅವನ ಪೂರ್ವಸುಕೃತವೋ, ಹಿರಿಯರ ಪುಣ್ಯಪರಿಪಾಕವೋ ತಿಳಿಯದು. ಹಿಂದಾನೊಂದು ದಿವಸ ಸೂರ್ಯಾಸ್ತಮಯವಾಗಲಿಕ್ಕೆ ಬಂದಿದೆ. ದನಕಾಯುವ ಹುಡುಗರೆಲ್ಲ ತಮ್ಮ ತಮ್ಮ ದನದ ಹಿಂಡುಗಳಿಗೆ ನೀರು ಕುಡಿಸಿಕೊಂಡು ಇನ್ನು ಊರ ಕಡೆಗೆ ಹೊರಡುವ ಸಮಯ. ಅಷ್ಟರಲ್ಲಿ ಅಡವಿಯೊಳಗೆ ಅದೇ ದಾರಿಯಿಂದ ಭೌಂ ಭೌಂ ಶಬ್ದ ಮಾಡುತ್ತ ಮೇಣೆಯೊಂದನ್ನು ಹೊತ್ತುಕೊಂಡು ಕೆಲವು ಜನರು ಬರುತ್ತಿದ್ದರು. ಹಿಂದೆ ಸ್ವಲ್ಪ ಪರಿವಾರವೂ ಇತ್ತು. ಇದನ್ನು ನೋಡಿದ ದನಕಾಯುವ ಹುಡುಗರು ಗಕ್ಕನೆ ನಿಂತು ಬಿಟ್ಟರು. ಅವರಿಗೆ ಇದೊಂದು ವಿನೋದವಾದಂತಾಯಿತು. ಮೊದಲೇ ಹುಡುಗರು, ಅಜ್ಞಾನಿಗಳು; ಅದರಲ್ಲಿಯೂ ಇವರು ದನಕಾಯುವವರು.

"ಜ್ಞಾನಿಗಳೊಳ್ ಯೋಗಿಗಳ| ಜ್ಞಾನಿಗಳೊಳ್ ಗೋಪರಧಿಕರದು ಕಾರಣದಿಂ"||

ಎಂಬಂತೆ ಗೋಪಾಲಕರು ಅಜ್ಞಾನಿಗಳಲ್ಲಿ ಅಗ್ರೇಸರರಲ್ಲವೇ? ಇಂಥವರಿಗೆ ವಿನೋದವೆನಿಸಿದ್ದರೆ ಆಶ್ಚರ್ಯವೇನು? ಜಾತ್ರೆಯಲ್ಲಿ ಜನರನ್ನು ಕಾಣದವರಂತೆ ಮಿಕಿ ಮಿಕಿ ನೋಡುತ್ತ ದೂರ ನಿಂತುಕೊಂಡರು! ಪಾಠಕ ಮಹಾಶಯ! ಇಂಥ ಮುಚ್ಚಂಜೆಯ ವೇಳೆಯೊಳಗೆ ಮೇಣೆಯಲ್ಲಿ ಕುಳಿತುಕೊಂಡು ಬಂದವರು ಯಾರಾಗಿರಬಹುದು? ನೀವೇನಾದರೂ ಬಲ್ಲಿರೋ? ಅವರು ಮತ್ತಾರೂ ಅಲ್ಲ. ಮಹಾ ಪ್ರಖ್ಯಾತರಾದ ಪದ್ಮನಾಭತೀರ್ಥ ಮಠದ ಯತಿಗಳು. ಸ್ವರ್ಣವರ್ಣತೀರ್ಥ+ರೆಂಬ ಹೆಸರಿನಿಂದ ಪ್ರಸಿದ್ಧ

---

+ ಸ್ವರ್ಣವರ್ಣತೀರ್ಥರು ಪದ್ಮನಾಭತೀರ್ಥ ಮಠದ ಎಂಟನೆಯ ಸ್ವಾಮಿಗಳು. ಮಾರ್ಕಾಂಡೇಯ ಅಂಶದವರು. ಇವರಿಗೆ ಪರಶುರಾಮತೀರ್ಥರೆಂದೂ ಹೆಸರುಂಟು. ಈ ಮಹಾನುಭಾವರು ಒಮ್ಮೆ ವಿಜಯನಗರದ ವಿಜಯವೆಂಕಟಪತಿಯೆಂಬ (         ) ಮಹಾರಾಜನಿಗಿದ್ದ ಮಹಾವ್ಯಾಧಿಯನ್ನು

ರಾದವರು. ಶ್ರೀರಂಗಕ್ಷೇತ್ರಕ್ಕೆ ಬರಬೇಕೆಂದು ಹೊರಟಿದ್ದರು. ಅಡವಿಯಲ್ಲಿ ದನಕಾಯುವ ಹುಡುಗರನ್ನು ಕಂಡ ಕೂಡಲೆ ಸ್ವಾಭಾವಿಕವಾಗಿ ಊರು ಇನ್ನೆಷ್ಟು ದೂರವಿರುವದೆಂದು ಕೇಳಿದರು. ಶ್ರೀಗಳವರ ಈ ಮಾತನ್ನು ಕೇಳಿ ಉಳಿದ ದನಗಾಹಿಗಳೆಲ್ಲ ಬಾಯಿಮುಚ್ಚಿಕೊಂಡು ಸುಮ್ಮನಿದ್ದರೂ ನಮ್ಮ ಲಕ್ಷ್ಮೀನಾರಾಯಣನು ಮಾತ್ರ ಬಿದ್ದು ಬಿದ್ದು ನಗಹತ್ತಿದನು. ಸ್ವಾಮಿಗಳವರು ಮತ್ತೊಮ್ಮೆ ಈತನನ್ನೇ ಕೇಳಿದರು. ಆಗಂತೂ ನಗುವು ತೀರ ಹೆಚ್ಚಾಯಿತು. ಬಾಯಿಂದ ಮಾತೇ ಇಲ್ಲ. ಅವರ ಮೋರೆ

---

ಪರಿಹಾರ ಮಾಡಿದ್ದರಿಂದ ಅರಸನು ಇವರಿಗೆ ಬಹು ರಾಜಮರ್ಯಾದೆಗಳನ್ನು ಕೊಟ್ಟದ್ದಲ್ಲದೆ 'ವೆಂಗೆರೆ' ಎಂಬ ಗ್ರಾಮವನ್ನೂ ಇನಾಮಾಗಿ ಹಾಕಿಕೊಟ್ಟನಂತೆ. ಹೀಗೆ ಗ್ರಾಮವನ್ನು ಹಾಕಿಕೊಟ್ಟ ಶಾಸನವು ಮುಳಬಾಗಿಲ ಮಠದಲ್ಲಿ ಅದ್ಯಾಪಿ ಇರುವದೆಂದು ಹೇಳುತ್ತಾರೆ.

ಇವರು ಬಹುಕಾಲ ಶ್ರೀರಂಗದಲ್ಲಿಯೇ ವಾಸಮಾಡಿ ಕಡೆಗೆ ಅಲ್ಲಿಯೇ ವೃಂದಾವನಸ್ಥರಾದರು. ಇವರ ವೃಂದಾವನವು ಸುಮಾರು ೫೦೦ ವರ್ಷಗಳ ಹಿಂದೆ ಶ್ರೀರಂಗದ ೫ನೇ ಪ್ರಾಕಾರದ ದಕ್ಷಿಣ ಚಿತ್ರವೀಥಿಯಲ್ಲಿ ಒಂದು ತಗ್ಗಾದ ಪ್ರದೇಶದಲ್ಲಿತ್ತು. ಅದರ ಹತ್ತರ ಪೂರ್ವಕ್ಕೆ ಅವರ ಮಠವೂ ಇತ್ತು. ಪಶ್ಚಿಮಕ್ಕೆ ವಿಜಯನಗರದ ರಾಜರ ಅರಮನೆಯಿತ್ತು. ಯಾವುದೋ ಕಾರಣದಿಂದ ವೃಂದಾವನದ ಮಂಟಪಾದಿಗಳು ಬಿದ್ದು ಹೋಗಿ ಈ ವೃಂದಾವನವು ಭೂಗತವಾಗಿ ಕಣ್ಣಿಗೆ ಗುರ್ತು ಸಹ ಕಾಣುತ್ತಿದ್ದಿಲ್ಲ. ಆ ವೃಂದಾವನವಿದ್ದ ಸ್ಥಳವು ಮುಳಬಾಗಿಲ ಮಠಕ್ಕೂ, ರಾಜರ ಅರಮನೆಗೂ ಮಧ್ಯದಲ್ಲಿತ್ತು. ಈ ಸ್ಥಳವನ್ನು ಈಚೆಗೆ ಶ್ರೀರಂಗದ ಮುನಸಿಪಾಲ್ಟಿಯವರು ಸ್ವಾಧೀನಪಡಿಸಿಕೊಂಡು, ಅಲ್ಲಿ ಹೆಣ್ಣುಮಕ್ಕಳ ಶಾಲೆಯನ್ನು ಕಟ್ಟಬೇಕೆಂದು ಒಂದು ಆಳುದ್ದ ತಳವನ್ನು ಶೋಧಿಸುತ್ತಿರಲಿಕ್ಕೆ ಈ ವೃಂದಾವನವು ಸಿಕ್ಕಿತಂತೆ. ಈಚೆಗೆ ಸರಕಾರದ ಸಹಾಯದಿಂದ ಆ ಸ್ಥಳವನ್ನು ಮುಳಬಾಗಿಲ ಮಠಕ್ಕೆ ಒಪ್ಪಿಸಿ, ಮಠದಿಂದ ವೃಂದಾವನದ ಪೂಜಾದಿಗಳು ನಡೆಯುವಂತೆ ಮಾಡಿರುವರು.

ಇವರು ಟೀಕಾಟಿಪ್ಪಣಿಗಳನ್ನೇನೂ ಬರೆಯದಿದ್ದರೂ, ಬ್ರಹ್ಮಣ್ಯತೀರ್ಥರಂತೆ ಅಂಶಮೂರ್ತಿಗಳಾದ ತಪಸ್ವಿಗಳಾಗಿದ್ದರು.

ಇವರ ಪುಣ್ಯದಿನ ಜ್ಯೇಷ್ಠವದ್ಯ ಚತುರ್ಥಿ.

(ಮಾಧ್ವಮುನಿವೃಂದ ಚರಿತ)

ಯನ್ನು ನೋಡುತ್ತಾನೆ; ನಗುತ್ತಾನೆ. ಶ್ರೀಗಳವರಿಗೆ ತಿಳಿಯದಾಯಿತು. ಇದೇಕೆ ಹೀಗೆ ನಗುವೆಯೆಂದು ಕೇಳಿದರು. 'ಚಿನ್ನದ ಬಣ್ಣ ಮಣ್ಣೊಳಗೆ ಮುಚ್ಚುವದಿಲ್ಲ'ಂಬ ಮಾತು ಸುಳ್ಳಲ್ಲ. ಲಕ್ಷ್ಮೀನಾರಾಯಣನು ದನ ಕಾಯುವ ಹುಡುಗನಾದರೂ ಆತನ ಅಪ್ರತಿಮವಾದ ಮೇಧಾಶಕ್ತಿಯು ಪ್ರಕಾಶಕ್ಕೆ ಬರದೆ ಹೋಗಲಿಲ್ಲ ಆ ವೇಳೆಯಲ್ಲಿ ಆ ಚಿಕ್ಕಬಾಲಕನು ಶ್ರೀಗಳವರಿಗೆ ಏನೆಂದು ಉತ್ತರ ಕೊಟ್ಟನೋ ಅದನ್ನು ನಮ್ಮ ರಸಿಕ ವಾಚಕರು ಹೃತ್ಪಟಲದಲ್ಲಿ ಕೊರೆದಿಡಬೇಕಾಗಿದೆ. ಆ ಉತ್ತರವೇನೆಂದು ಕೇಳುವಿರೋ?

"ಸ್ವಾಮೀ! ನಾವಾದರೋ ಚಿಕ್ಕ ಬಾಲಕರು. ಮೇಲಾಗಿ ಬಹು ಮಂದಗತಿಯುಳ್ಳ ಎಮ್ಮೆಗಳನ್ನು ಹೊಡಕೊಂಡು ಹೋಗಬೇಕಾಗಿದೆ. ಈಗಾಗಲೇ ಸೂರ್ಯನು ಅಸ್ತಮಿಸಹತ್ತಿದ್ದಾನೆ. ಅಂದಮೇಲೆ ಊರು ದೂರವಿರಬಹುದೋ ಸಮೀಪವಿರಬಹುದೋ? ಇಷ್ಟು ಸಣ್ಣ ಮಾತನ್ನು ತಮ್ಮಂಥವರು ಅರಿಯದೆ ಹೋದುದಕ್ಕಾಗಿ ಮತ್ತು ದನಕಾಯುವ ನಮ್ಮನ್ನು ಕೇಳಿದುದಕ್ಕಾಗಿ ಇಷ್ಟೊಂದು ನಗೆ ಬಂತು. ಮತ್ತೇನೂ ಇಲ್ಲ"

ಇದೇ ಮಾತನ್ನೇ ಇವರ ವಂಶದ ೨೧ನೇ ಯತಿಗಳಾದ ಶ್ರೀನಿಧಿ ತೀರ್ಥರೆಂಬವರು ಎಷ್ಟು ಸುಂದರನಾಗಿ ಬಣ್ಣಿಸಿದ್ದಾರೆ ನೋಡಿರಿ:—

ಸಾಯಂಕಾಲೇಕದಾಚಿದ್ಗೋಗಣಭರಿತೇಸ್ವರ್ಣವರ್ಣೇ ಯತೀಂದ್ರೇ|
ದೂರೇಗ್ರಾಮಃಪುರಸ್ತಾತ್ಕಿಯತಿಕಥಯಮೇ ಬಾಲಕೋತಿಪ್ರವಾಣೇ||
ಸೂರ್ಯಂಮಾಂ ಸೌರಭಾಂಸ್ತ್ವಂ ಸಕಲಬುಧಮಣೇ ಯಸ್ಯಕಿಂ
ತ್ವಾಂಬ್ರುವೇಹಂ |
ಯೋವಾದಿ ಸ್ವರ್ಣವರ್ಣಂ ಗುರುಮಿತಿ ಸಹಸಾ ಸೋವತಾನ್ಮಾಂ
ಯತೀಂದ್ರಃ ||
(ಶ್ರೀಪಾದರಾಜಾಷ್ಟಕ)

ಆಯಿತು; ಲಕ್ಷ್ಮೀನಾರಾಯಣನ ಮಾತು ಮುಗಿಯಿತು. ಸ್ವರ್ಣವರ್ಣತೀರ್ಥರು ಬಾಯಿಮೇಲೆ ಬೆರಳಿಟ್ಟುಕೊಂಡು ಬೆಪ್ಪಾದರು. ಆಹಾ! ಈ ಹುಡುಗನು ಸಾಮಾನ್ಯನಲ್ಲ. ಏನೋ ಅದೃಷ್ಟದೋಷದಿಂದ ದನ ಕಾಯಲಿಕ್ಕೆ ಬಂದಿರುವನೇ ಹೊರತು, ನಿಜವಾಗಿಯೂ ಇವನು ದನಕಾಯ ತಕ್ಕವನಲ್ಲ. ಛೀ! ಛೀ! ದನಕಾಯುವವನಾಗಿದ್ದರೆ ಇಷ್ಟೊಂದು ಪ್ರತಿಭೆ

ಯಲ್ಲಿಂದ ಬರಬೇಕು? ಇಲ್ಲ, ಅಲ್ಲ; ದನಕಾಯುವವನು ಅಲ್ಲವೇ ಅಲ್ಲ. ಯಾವನೋ ಒಬ್ಬ ಮಹಾಪುರುಷನು ಈ ರೂಪದಿಂದ ಅವತರಿಸಿರಬಹುದು. ಭಲೆ! ಶಹಬಾಸ್! ಈತನ ತಾಯಿ-ತಂದೆಗಳು ಇನ್ನೆಷ್ಟು ಸುಕೃತಿಗಳೋ! ಪರಮಾತ್ಮನಲ್ಲಿ ಏನನ್ನು ಪಡೆದುಕೊಂಡು ಬಂದಿದ್ದರೋ, ಇಂಥಾ ಪ್ರತಿಭಾ ಶಾಲಿಯಾದ ಮಗುವನ್ನು ಪಡೆದಿರುವರು, ಎಂದು ಮನಸ್ಸಿನಲ್ಲಿಯೇ ಶ್ಲಾಘಿಸುತ್ತ:-ಮಗೂ ನಿನ್ನನ್ನು ಪಡೆದ ಜನನೀ-ಜನಕರು ಧನ್ಯರು! ಧನ್ಯರು! ಎಂಬದಾಗಿ ಆತನ ತಲೆಯಮೇಲೆ ಕೈಯಿಟ್ಟರು. ನೋಡಿದಿರಾ! ದನಕಾಯುವವನ ದೈವಶಾಲಿತ್ವವನ್ನು! ಹಿಂದಕ್ಕೆ ದನಕಾಯುತ್ತಿದ್ದ ವೆಂಕಣ್ಣನೆಂಬ ಹುಡುಗನೊಬ್ಬನು ಶ್ರೀಮದ್ರಾಘವೇಂದ್ರಸ್ವಾಮಿಗಳಿಂದ ಅನುಗ್ರಹಿಸಲ್ಪಟ್ಟವನಾಗಿ ಕಡೆಗೆ ಆ ಪ್ರಾಂತದ ದಿವಾಣನಾದನೆಂಬುದನ್ನು ರಾಘವೇಂದ್ರ ಗುರುಕಥಾಮೃತದಲ್ಲಿ ನೀವು ಓದಿಲ್ಲವೇ? ತಿಮ್ಮಣ್ಣನೆಂಬವನೂ ಚಿಕ್ಕಂದಿನಲ್ಲಿ ದನಕಾಯುವ ಹುಡುಗನೇ ಆಗಿದ್ದು, ಮುಂದೆ ರಾಯರ ಅಪ್ಪಾಜಿಯೆಂಬ ಹೆಸರಿನಿಂದ ವಿಜಯನಗರದ ಪ್ರಖ್ಯಾತ ಮಂತ್ರಿಯಾದನು! ಇದರಂತೆಯೇ ತಮಿಳನಾಡಿನ ಕರ್ನಾಟಕ ಮಂತ್ರಿಯೆನಿಸಿದ ಸುಪ್ರಸಿದ್ಧ ಗೋವಿಂದ ದೀಕ್ಷಿತರ ಮನೆಯಲ್ಲಿ ದನಕಾದುಕೊಂಡಿದ್ದ ಚವ್ವನೆಂಬವನು ಅವರನುಗ್ರಹವಾದ ಕೂಡಲೆ ಚವ್ವಪ್ಪನಾಯಕನೆಂಬ ಪ್ರಖ್ಯಾತನಾಮಧೇಯದಿಂದ ತಂಜಾವೂರಿನ ಅರಸನಾಗಿ ಕುಳಿತನು.* ಅಂತೆಯೇ ಸುಭಾಷಿತಕಾರರು ಹೀಗೆ ಹಿಕ್ಕಣಿಸಿರುವರು:—

ಸಂಸಾರ ವಿಷವೃಕ್ಷಸ್ಯ ದ್ವೇಫಲೇಹ್ಯಮೃತೋಪಮೇ ||
ಕಾವ್ಯಾಮೃತ ರಸಾಸ್ವಾದಃ ಸಜ್ಜನೈಃ ಸಹಸಂಗಮಃ ||

(ದಿವ್ಯವಾದ ಕಾವ್ಯಗಳ ಅಮೃತರಸಾಸ್ವಾದನವು, ಸಜ್ಜನರ ಸಹವಾಸವು ಇವೆರಡೂ ಸಂಸಾರವೆಂಬ ವಿಷವೃಕ್ಷಕ್ಕೆ ಅಮೃತೋಪಮಾನವಾದ ಹಣ್ಣುಗಳು.)

---

* ಚಾಮರಾಜನಗರದ (ಮೈಸೂರ) ಕಾದಂಬರೀಸಂಗ್ರಹ ಮಾಸಪತ್ರಿಕೆಯ ಸಂಪಾದಕರಾದ ಶ್ರೀ ವೆಂಕಟರಮಣಶಾಸ್ತ್ರಿಗರವರು ರಚಿಸಿದ 'ತಮಿಳುನಾಡಿನ ಕರ್ಣಾಟಕಮಂತ್ರಿ' ಎಂಬ ಗ್ರಂಥದಲ್ಲಿ ಈ ವಿಷಯವು ವಿಸ್ತಾರವಾಗಿ ವರ್ಣಿತವಾಗಿದೆ. ರಸಿಕವಾಚಕರು ಒಮ್ಮೆಯಾದರೂ ಇದನ್ನು ಓದಿ ನೋಡಬೇಕೆಂದು ಹೇಳದೆ ಇರಲಾರೆವು. ಒಂದು ರೂಪಾಯಿ ಬೆಲೆಗೆ ದೊರೆಯುವದು.

ಈಗ ನಮ್ಮ ಲಕ್ಷ್ಮೀನಾರಾಯಣನಿಗಾದರೂ, ಹೀಗೆವೇ ಮಹಾತ್ಮರಾದ ಸ್ವರ್ಣವರ್ಣತೀರ್ಥರ ಪರಮಾನುಗ್ರಹವಾಯಿತು. ಆತನು ಧನ್ಯನಾದನಿಷ್ಟೇ ಅಲ್ಲ; ಕುಲಕೋಟಿಯೇ ಉದ್ಧಾರವಾಗಿ ಹೋಯಿತು. ಅಂದಮೇಲೆ ಆತನ ಪುಣ್ಯೋದಯವನ್ನು ಎಷ್ಟೆಂದು ಬಣ್ಣಿಸೋಣ!

ಲೋಕದಲ್ಲಿ ಅನೇಕರು ಮಕ್ಕಳನ್ನು ಪಡೆಯುವರು. ಪ್ರತಿದಿನವೂ ಲಕ್ಷಗಟ್ಟಲೆ, ಕೋಟಿಗಟ್ಟಲೆ ಹುಟ್ಟುವವು. ಪ್ರಯೋಜನವೇನು? ಅವೆಲ್ಲವೂ ಜನನ-ಮರಣ ರಜಿಸ್ತರವನ್ನು ತುಂಬಲಿಕ್ಕೆ ಮಾರ್ಗವೇ ಹೊರತು, ಇನ್ಯಾವ ಲೆಕ್ಕಕ್ಕೂ ಹತ್ತುವದಿಲ್ಲ ಮಹಾಪ್ರತಿಭಾಶಾಲಿಯಾಗಿ ಮುಂದೆ ರಾಷ್ಟ್ರದ ಏಳಿಗೆಗೆ ಕಾರಣೀಭೂತವಾಗತಕ್ಕದ್ದು ಅದರಲ್ಲಿ ಎಲ್ಲಿಯೋ ಹತ್ತುಸಾವಿರಕ್ಕೊಂದು ಲಕ್ಷಕ್ಕೊಂದು. ಅದರಲ್ಲಿಯೂ ಮಹನ್ನೀಯರ ಅನುಗ್ರಹವನ್ನು ಪಡೆದು ಮಹಾತ್ಮನೆಂಬ ಹೆಸರಿನಿಂದ ಲೋಕವನ್ನೇ ಪ್ರಕಾಶಪಡಿಸತಕ್ಕದ್ದು ಕೋಟಿ ಕೋಟಿ ಸಂಖ್ಯೆಯಲ್ಲಿ ಒಂದು ಇರುತ್ತದೋ ಇಲ್ಲವೋ ಹೇಳಲಾಗದು.

'ಪುಣ್ಯೈರೇವಹಿಲಭ್ಯತೇ ಸುಕೃತಿಭಿಃ ಸತ್ಸಂಗತಿ ದುರ್ಲಭಾ'||

ಎಂಬಂತೆ ಮಹನ್ನೀಯರ ಸಹವಾಸವು ದೊರೆತು ಅವರಿಂದನುಗ್ರಹವನ್ನು ಸಂಪಾದಿಸುವದು ಜನ್ಮಾಂತರೀಯ ಪುಣ್ಯಶೇಷವೇ ಎಂದು ಹೇಳಬೇಕಾಗಿರುವದು; ಆದರೂ—

ಧರ್ಮಕೆ ಕರ್ಮಕ್ಕತಿಥಿಗೆ| ಪೆರ್ಮೆಯ ಪಿತೃಗಳ್ಗೆ ದೇವಕಾರ್ಯಕ್ಕೆಂದುಂ||
ನಿರ್ಮಳಸಂತತಿಗಳ್ಗಂ| ಕೂರ್ಮೆಯ ಕುಲವಧುವೆ ಮುಖ್ಯಮೆಲೆಗುಣರತ್ನಾ||

(ಧರ್ಮ-ಅತಿಥಿಸತ್ಕಾರ-ಪಿತೃಕಾರ್ಯ-ದೇವಕಾರ್ಯ-ನಿರ್ಮಲವಾದ ಸಂತತಿ ಇವಕ್ಕೆಲ್ಲ ಕುಲಸ್ತ್ರೀಯಳೇ ಮುಖ್ಯ ಕಾರಣಳಾಗಿರುವಳು.)

ಎಂಬ ಕವಿವಚನದಂತೆ ಇಂಥಾ ಪುಣ್ಯಪುರುಷರು ಹುಟ್ಟಬೇಕಾದರೆ ಕುಲವಧುವು ಸಿಕ್ಕಬೇಕಾದುದೂ ಒಂದು ಕಾರಣವೆಂದು ತಿಳಿದುಬರುವದು. ಅಂತೆಯೇ ಸುಭಾಷಿತಕಾರರು—

'ಸುಶೀಲೋಮಾತೃಪುಣ್ಯಾನಿ ಪಿತೃಪುಣ್ಯಾನಿ ಚಾತುರಃ'||

(ತಾಯಿಯ ಪುಣ್ಯದಿಂದ ಸುಶೀಲನಾದ ಮಗನೂ-ತಂದೆಯ ಪುಣ್ಯದಿಂದ ಚತುರನೂ ಹುಟ್ಟುವರು.)

ಎಂದು ಹೇಳಿಕೊಂಡಿರುವರು. ಅಂದಮೇಲೆ ಇಲ್ಲಿ ಲಕ್ಷ್ಮೀನಾರಾಯಣನ

ಭಾವೀ ಭಾಗ್ಯಕ್ಕೆ ಆತನ ಮಹತ್ಪುಣ್ಯವೊಂದಲ್ಲದೆ ತಂದೆ-ತಾಯಿಗಳ ಪುಣ್ಯಕ್ಷೇತ್ರವೂ ಹಿಂದು ಮುಖ್ಯ ಕಾರಣವಾಗಿತ್ತೆಂಬುದರಲ್ಲಿ ಸಂಶಯ ವೇನು? ಇಂಥಾ ಪುಣ್ಯಭೂಮಿಯಲ್ಲಿ ಜನಿಸಿದ ಪುಣ್ಯತಮವಾದ ಹಿಂದು ಸಣ್ಣ ಅಂಕುರವೇ ಮುಂದೆ ದೊಡ್ಡದಾಗುತ್ತಾಗುತ್ತಾ ಸಹಸ್ರಾರು ಶಾಖೋಪಶಾಖೆಗಳಿಂದ ಕೂಡಿಕೊಂಡು ಕರ್ಣಾಟಕಸ್ಥರ ಕೈಗೆ ಬೇಡಿದ ಫಲಗಳನ್ನು ನೀಡುವ ಭೂಲೋಕದ ಕಲ್ಪತರುವಾಯಿತೆಂದು ಹೇಳಲು ನಮ್ಮ ಅಂತಃಕರಣವು ಉಕ್ಕಿ ಕೋಡಿಹರಿಯುತ್ತಿರುವದು. ಅಂದರೆ— ಈ ಚಿಕ್ಕಬಾಲಕನೇ ಮುಂದೆ ಲಕ್ಷ್ಮೀನಾರಾಯಣಮುನಿ, ಶ್ರೀಪಾದರಾಜರು ಎಂಬ ಹೆಸರಿನಿಂದ ಅತ್ಯುಜ್ವಲ ಕರ್ನಾಟಕವಿಭೂತಿಯೆನಿಸಿಕೊಂಡನು. ಇವರೇ ನಮ್ಮ ಕಥಾನಾಯಕರು, ಶ್ರೀಪಾದರಾಜಗುರುಗಳು.

ಲಕ್ಷ್ಮೀನಾರಾಯಣನ ಮೇಧಾಶಕ್ತಿಯನ್ನು ನೋಡಿದಾಗಲೇ ಸ್ವರ್ಣ ವರ್ಣತೀರ್ಥರಿಗೆ ಅತ್ಯಾನಂದವಾಗಿಹೋಗಿತ್ತು. ಅವರು ಊರೊಳಗೆ ಬಂದವರೇ ಶಿಷ್ಯರಿಗೆ ಹೇಳಿ ಆ ಹುಡುಗನ ತಾಯಿ-ತಂದೆಗಳನ್ನು ಕರೆ ಕಳುಹಿದರು. ಶೇಷಗಿರಿಯಪ್ಪನಿಗೂ-ಗಿರಿಯಮ್ಮನಿಗೂ ಭಯ ಹುಟ್ಟಿತು. ಬಡವರಾದ ನಮ್ಮನ್ನು ಮಹಾ ಯತಿಗಳು ಯಾಕೆ ಕರೆಸಿದರೋ ಏನೋ ಎಂಬುದೇ ಅವರಿಗೆ ಹೆದರಿಕೆ. ಶ್ರೀಗಳವರು ಬಿಡಲೇಇಲ್ಲ. ಮೇಲಿಂದ ಮೇಲೆ ಮೂರು ನಾಲ್ಕು ಸಾರೆ ಕರೆಕಳುಹಿದರು. ಕಡೆಗೆ ಅನಿವಾರ್ಯಹಕ್ಕೆ ಬಂತು. ಹೇಗೋ ಬಂದು ಸಾಷ್ಟಾಂಗ ಹಾಕಿದರು. ಸ್ವಾಮಿಗಳು ಮುಗುಳುನಗೆಯಿಂದ:—"ಅಪ್ಪಾ ಶೇಷಗಿರಿರಾಯಾ! ಅವ್ವಾ ಗಿರಿಯಮ್ಮಾ! ನೀವೆಂಥ ಪುಣ್ಯಜೀವಿಗಳವ್ವಾ! ಎಷ್ಟು ಸುಕೃತಿಗಳು! ಇಂಥಾ ಮುದ್ದು ಬಾಲಕನನ್ನು ಪಡೆದ ನಿಮ್ಮ ಪುಣ್ಯೋದರವನ್ನು ನಾವೆಷ್ಟೆಂದು ಹೊಗ ಳೋಣ! ಅಹಾ! ಇಂದಿಗೆ ನೀವು ಧನ್ಯರು! ಧನ್ಯರು! ನಿಮ್ಮ ಮಾನುಷ ಜನ್ಮವು ಸಾರ್ಥಕವಾಯಿತು. ನಿಮ್ಮ ಬಾಲಕನು ಸಾಮಾನ್ಯನೆಂದು ತಿಳಿಯಬೇಡಿರಿ. ಈತನು ಪರಮ ತಪೋಧನನೂ ಭಗವದ್ಭಕ್ತನೂ ಆಗ ತಕ್ಕವನು. ಇಂಥವನನ್ನು ದನಕಾಯುಲಿಕ್ಕೆ ಹಚ್ಚದೆ, ಇನ್ನುಮೇಲೆ ನಮ್ಮ ವಶಕ್ಕೆ ಕೊಟ್ಟಲ್ಲಿ ಚನ್ನಾಗಿ ವಿದ್ಯಾ ಬುದ್ಧಿಗಳನ್ನು ಕಲಿಸಿ ಶ್ರೇಷ್ಠ ಋಷಿಯನ್ನಾಗಿ ಮಾಡುವೆವು. ತುಸವಾದರೂ ಯೋಚನೆ ಮಾಡದೆ ಈತ ನನ್ನು ನಮಗೊಪ್ಪಿಸಬೇಕು" ಎಂದು ಕೇಳಿದರು.

ಮುಂದಾಗುವ ಮಗನ ಅಭ್ಯುದಯದ ಲಕ್ಷಣಗಳನ್ನು ಕೇಳಿ, ತಂದೆ-ತಾಯಿಗಳ ಮನಸ್ಸಿಗೆ ಸಂತೋಷವಾಯಿತಾದರೂ, ಆತನನ್ನು ಕೊಡಬೇಕೆಂಬ ಶ್ರೀಗಳವರ ನುಡಿಯು ಅವರಿಗೆ ಸಿಡಿಲು ಹೊಡೆದಂತೆ ಪರಿಣಮಿಸಿತು. ದೊಪ್ಪನೆ ನೆಲಕ್ಕೆ ಬಿದ್ದು ಬಿಟ್ಟರು. 'ಹಕ್ಕಲು ಇಲ್ಲದ ಹಿಕ್ಕಲಲ್ಲ, ಮಕ್ಕಳು ಇಲ್ಲದ ಭಾಗ್ಯವಲ್ಲ' ಎಂಬ ನಾಣ್ಣುಡಿಯಂತೆ, ಎಂತಹ ದರಿದ್ರರಿಗಾದರೂ ಮಕ್ಕಳ ಮೇಲಿನ ಕಕ್ಕುಲತೆಯು ಹೆಚ್ಚಿನದು. ಅಕ್ಕರತೆಯಿಂದ ಸಾಕಿ ಸಲಹಿದ ಚಿಕ್ಕ ಮಕ್ಕಳನ್ನು ಗಕ್ಕನೆ ಕೊಡುವದೆಂದರೆ ದುಃಖವಲ್ಲವೆ? ಅಂದಮೇಲೆ ತಂದೆ-ತಾಯಿಗಳಿಗೆ ಆಗ ಹೇಗಾಗಿದ್ದೀತು? ಪೂರ್ವದಲ್ಲಿ ಪುತ್ರಕಾಮೇಷ್ಟಿಯಾಗ ಮಾಡಿ ಪುತ್ರರನ್ನು ಪಡೆದ ದಶರಥನಿಗೆ ವಿಶ್ವಾಮಿತ್ರರು ಬಂದು ರಾಮನನ್ನು ಕೊಡಬೇಕೆಂದು ಕೇಳಿದಾಗ ಎಷ್ಟು ವ್ಯಸನವುಂಟಾಗಿತ್ತೋ, ಅದಕ್ಕಿಂತಲೂ ಹೆಚ್ಚಾದ ವ್ಯಸನವು ಈಗ ಅವರಿಗುಂಟಾಯಿತು. ಸಂತಾನದ ವಿಷಯದಲ್ಲಿ ಶ್ರೀಮಂತರೇನು? ಬಡವರೇನು? ಅದು ಸರ್ವರಿಗೂ ಸಮಾನ ಸುಖವನ್ನು ಕೊಡತಕ್ಕಂಥಾದ್ದು! ಅದರೊಳಗೆ ಒಬ್ಬನೇ ಒಬ್ಬ ಮಗನಾದ್ದರಿಂದ ತಂದೆ-ತಾಯಿಗಳಿಗೆ ಇದೇ ಪ್ರೇಮದ ಪುತ್ಥಳಿ! ಇದೇ ಮುತ್ತಿನ ಚೆಂಡು! ಇದೇ ಸಕಲಾಭರಣ!! ಅವರ ಸರ್ವಸ್ವವೂ ಇದೇ ಆಗಿತ್ತು! ಇಂಥಾ ಸ್ವರ್ಗೀಯ ರತ್ನವನ್ನು-ಕಾಮಧೇನುವನ್ನು ಪರರ ಕೈಯಲ್ಲಿ ಹೇಗೆ ಕೊಟ್ಟಾರು? ಸಾಕ್ಷಾತ್ತು ಸ್ವರ್ಗಾಧಿಪತ್ಯವನ್ನೇ ಕೊಡುತ್ತೇವೆಂದು ಹೇಳಿದಾಗ್ಯಾದರೂ ಮಕ್ಕಳನ್ನು ಯಾರಾದರೂ ಕೊಟ್ಟಾರೋ? ತಂದೆ-ತಾಯಿಗಳಿಗೆ ಉಭಯ ಸಂಕಟ ಬಂತು! ಕೊಟ್ಟು ಬಿಡೋಣವೆಂದರೆ, ಹತ್ತು ತಿಂಗಳು ಹೊತ್ತು, ಹೆತ್ತ ಹೊಟ್ಟೆಯ ಕರುಳನ್ನು ಬಿಟ್ಟು ಬದುಕಲಾರರು; ಕೊಡುವದಿಲ್ಲವೆಂದು ಹೇಳಿದರೆ, ಮಹಾತ್ಮರಾದ ಯತಿಗಳ ಕೋಪಕ್ಕೆ ಪಾತ್ರರಾಗಬೇಕಾಗುವದಲ್ಲಾ, ಎಂಬುದೊಂದು ಅಂಜಿಕೆ. ಬಿಸಿ ಬಿಸಿ ತುಪ್ಪವನ್ನು ಬಾಯಲ್ಲಿ ಹಾಕಿಕೊಂಡಂತಾಯಿತು. ಉಗುಳಿದರೆ ನಷ್ಟವಾಗುವದು; ನುಂಗಿಬಿಡೋಣವೆಂದರೆ ಗಂಟಲು ಸುಡುತ್ತಿರುವದು ಇನ್ನೇನು ಗತಿ! ಹೀಗೆ ಒಳಗಿಂದೊಳಗೆ ಕೊರಗುತ್ತಿರುವ ಜನನೀ-ಜನಕರ ಮನದಳಲನ್ನು ಶ್ರೀಗಳವರು ತಿಳಿಯದೆ ಹೋಗಲಿಲ್ಲ. ಅವರು ಕೂಡಲೆ ಶೇಷಗಿರಿಯಪ್ಪನನ್ನು ಕರೆದು: "ಅಪ್ಪಾ, ನಿನ್ನ ಮಗನು ಸಾಧಾರಣ ಹುಡುಗನೆಂದು ತಿಳಿಯಬೇಡ.

ಆತನೊಬ್ಬ ಅದ್ವಿತೀಯ ಬುದ್ಧಿಶಾಲಿಯೂ, ಮಹಾತ್ಮನೂ, ಕರ್ನಾಟಕ ಕುಲದೀಪಕನೂ ಆಗತಕ್ಕವನಿರುವನು ಆತನೀಗ ನಿನಗೆ ಬಾಲಕನಂತೆ ಕಂಡು ಬಂದರೂ ಬಾಲಕನಲ್ಲವೆಂದು ತಿಳಿ ವಿಶ್ವಾಮಿತ್ರರ ಕೂಡ ಹೋದ ಪ್ರಭು ರಾಮಚಂದ್ರನು ಬಾಲಕನೇ ಆಗಿದ್ದರೂ, ಕ್ರೂರ ರಕ್ಕಸ ಸಂಹಾರವೆಂಬ ಅಸಾಧ್ಯ ಕಾರ್ಯವನ್ನು ಲೀಲಾಮಾತ್ರದಿಂದ ನಡಿಸಿ ಬಿಡಲಿಲ್ಲವೇ? ಈತನನ್ನು ಹಾಗೆಯೇ ಭಾವಿಸು. ನಮ್ಮ ಮೇಲೆ ವಿಶ್ವಾಸವಿಡು. ಅಮ್ಮಾ, ಗಿರಿಯಮ್ಮಾ! ನಿನ್ನೀ ಬಾಲಕನನ್ನು ಮಗನಂತೆ ಕಾಪಾಡುವೆವು ಆತನು ವಿದ್ಯಾ-ಬುದ್ಧಿಗಳನ್ನು ಕಲಿತು ದೊಡ್ಡವನಾಗಿ 'ಮಾತೃದೇವೋಭವ, ಪಿತೃದೇವೋಭವ' ಎಂಬಂತೆ ನಿಮ್ಮನ್ನು ರಕ್ಷಿಸುವನು ಇದು ನಮ್ಮ ಪೂರ್ಣ ಆಶೀರ್ವಾದವೆಂದು ತಿಳಿ; ಸಮ್ಮತಿಯನ್ನು ಕೊಡು'' ಹೀಗೆಂದು ಪರಿಪರಿಯಾಗಿ ಬೋಧಿಸಿದರು. ಆಗ ಗಿರಿಯಮ್ಮನು ತುಸ ಧೈರ್ಯ ತಂದುಕೊಂಡು —“ಭೋ ಸ್ವಾಮಿ, ಗುರುವರ್ಯರೇ! ಬಡವಿಯಾದ ನಾನು ಹೆಚ್ಚಿಗಿನ್ನೇನು ಹೇಳಲಿ? ಕಂದಮ್ಮನು ನನ್ನ ಮಗನಲ್ಲ; ತಮ್ಮ ಮಗನು! ತಾವು ಬೇಕಾದಂತೆ ಶಿಕ್ಷಿಸಿರಿ; ರಕ್ಷಿಸರಿ! ಆತನ ಎಲ್ಲ ಭಾರವೂ ತಮ್ಮನ್ನೇ ಕೂಡಿರುವದೆ''ಂದು ಹೇಳಿದಳು. ಶೇಷಗಿರಿಯಪ್ಪನಾದರೂ ಅವರ ಮಾತಿಗೆ ಅನುಮೋದಿಸಿ, ದಶರಥನು ರಾಮನನ್ನು ವಿಶ್ವಾಮಿತ್ರರಿಗೆ ಒಪ್ಪಿಸಿದಂತೆ, ಲಕ್ಷ್ಮೀನಾರಾಯಣನನ್ನು ಸ್ವರ್ಣವರ್ಣತೀರ್ಥರ ವಶಕ್ಕೆ ಕೊಟ್ಟುಬಿಟ್ಟನು. ಎಷ್ಟಾದರೂ ಮಾತೆಯ ಅನುಗ್ರಹ! ಕಡೆಗೆ ಅದೇ ನಿಜವಾಯಿತು. ಈ ಬಾಲಕನೇ ಮುಂದೆ ಶ್ರೀಪಾದರಾಜರೆಂಬ ಹೆಸರಿನಿಂದ ಸ್ವರ್ಣವರ್ಣತೀರ್ಥರಿಗೆ ಮಗನಾಗಿ-ಪದ್ಮನಾಭತೀರ್ಥ ಮಠದ ಅಧಿಪತಿಯಾದನೆಂಬದು ಮುಂದಿನ ಆತನ ಚರಿತ್ರದಿಂದ ತಾನೇ ತಿಳಿದು ಬರುವದು.

ಹಣೆಯಲ್ಲಿ ಬರೆದದ್ದನ್ನು ಹರಿಹರರೂ ತಪ್ಪಿಸಲಾರರೆಂಬ ಮಾತು ಸುಳ್ಳಲ್ಲ. ನಮ್ಮ ಲಕ್ಷ್ಮೀನಾರಾಯಣನ ಅದೃಷ್ಟದಲ್ಲಿ ಇಂಥಾ ಮಹಾತ್ಮರ ಸಹವಾಸವು ದೊರೆಯಬೇಕೆಂದಿತ್ತು. ಅದು ಹೇಗೆ ತಪ್ಪೀತು? ದನಕಾಯುತ್ತ ಅಡವಿಯಲ್ಲಿದ್ದವನನ್ನೂ ಕರಕೊಂಡು ಬಂದಿತು. 'ವೇಳೆ ಬಂದರೆ, ಆಳು ಅರಸಾಗುವನೆ'ಂಬ ಮಾತು ನಿಜ. ಇದಕ್ಕನ್ನಬೇಕು, ಯೋಗಾಯೋಗ! ದೈವವಿಲಾಸ!!

ಯಥಾಚಿಂತಾಮಣಿಂ ಸ್ಪೃಷ್ಟ್ವಾ ಲೋಹಕಾಂಚನತಾಂ ವ್ರಜೇತ್ ।
ಯಥಾ ಜಂಬೂನದೀಂಪ್ರಾಪ್ಯಮೃತ್ತಿಕಾಸ್ವರ್ಣತಾಂ ವ್ರಜೇತ್ ॥

ಯಥಾಮಾನಸಮಭ್ಯೇತ್ಯವಾಯಸಾಯಾಂತಿ ಹಂಸತಾಂ ।
ಯಥಾಮೃತಂ ಸಕೃತ್ಪೀತ್ವಾ ನರೋದೇವತ್ವಮಾಪ್ನುಯಾತ್ ॥
ತಥೈವಹಿ ಮಹಾತ್ಮಾನೋ ದರ್ಶನಸ್ಪರ್ಶನಾದಿಭಿಃ ।
ಸಂತಃ ಪುನಂತ್ಯಘೋಪೇತಾನ್ ಸತ್ಸಂಗೋದುರ್ಲಭೋಹ್ಯತಃ ॥
(ಸ್ಕಂದಪುರಾಣ-ಬ್ರಹ್ಮೋತ್ತರಖಂಡ)

(ಚಿಂತಾಮಣಿಯ ಸ್ಪರ್ಶದಿಂದ ಲೋಹವು ಬಂಗಾರವಾಗುವಂತೆ, ಜಂಬೂನದಿಯಲ್ಲಿ ಹುಟ್ಟಿದ ಮೃತ್ತಿಕೆಯು ಸುವರ್ಣವಾಗುವಂತೆ, ಮಾನಸ ಸರೋವರವನ್ನು ಸೇರಿದ ಕಾಗೆಗಳು ಹಂಸಗಳಾಗುವಂತೆ, ಅಮೃತಪಾನ ಮಾಡಿದ ನರರು ಸುರರಾಗುವಂತೆ—ಮಹಾತ್ಮರ ದರ್ಶನ ಸ್ಪರ್ಶನಾದಿಗ ಳಿಂದಲೇ ಮನುಷ್ಯನ ಪಾಪಗಳೆಲ್ಲ ಸುಟ್ಟು ಬೂದಿಯಾಗಿ ಅವನು ಪವಿತ್ರ ನಾಗುವನು. ಆದಕಾರಣ ಸತ್ಸಂಗವು ಬಹು ದುರ್ಲಭವಾದದ್ದು)

ಎಂಬೀ ರೀತಿಯಾಗಿ ಸತ್ಸಂಗದ ಮಾಹಾತ್ಮ್ಯೆಯು ಬಹು ಮುಖದಿಂದ ವರ್ಣಿತವಾಗಿರುವದು: ಇಂಥಾ ದುರ್ಲಭವಾದ-ದುಃಸಾಧ್ಯವಾದ ಸತ್ಸಹ ವಾಸವು ಸಹಜವಾಗಿ ದೊರೆಯಿತೆಂದ ಮೇಲೆ ಲಕ್ಷ್ಮೀನಾರಾಯಣನು ಎಂತಹ ಅದೃಷ್ಟವಂತನೆಂದು ಹೇಳೋಣ! ಯಾವ ಮಹಾತ್ಮರ ಪಾದ ರಜಸ್ಸನ್ನು ಶ್ರೀಮನ್ನಾರಾಯಣನೇ ರನ್ನ ಸಂಪುಟದಲ್ಲಿಟ್ಟು ಪೂಜಿಸುತ್ತಿರು ವನೋ, ಅಂತಹ ಮಹಾತ್ಮರು-ಸತ್ಪುರುಷರೊಬ್ಬರು ಅನಾಯಾಸವಾಗಿ ಅಡವಿಯಲ್ಲಿದ್ದವನಿಗೆ ದರ್ಶನಕೊಟ್ಟು ತಮ್ಮ ಸೇವೆಗೆ ನಿಲ್ಲಿಸಿಕೊಂಡರೆಂ ಬುದು ಸಾಮಾನ್ಯವಾದುದಲ್ಲ.

'ಮಹತ್ಸೇವಾಂದ್ವಾರಮಾಹುರ್ವಿ
ಮುಕ್ತೇಸ್ತಮೋದ್ವಾರಂ ಯೋಷಿತಾಂ ಸಂಗಿಸಂಗಂ' ॥
(ಭಾಗವತ.)

ಎಂಬಂತೆ—ಮೋಕ್ಷಕ್ಕೆ ಕಾರಣೀಭೂತವಾದಂಥ ಮಹಾತ್ಮರ ಸೇವೆಯು ದೊರೆಯಬೇಕಾದರೆ ಆತನು ಜನ್ಮ ಜನ್ಮಾಂತರದಲ್ಲಿ ಇನ್ನೆಷ್ಟು ಪುಣ್ಯ ಮಾಡಿರಬೇಕೋ—ಇಂತಹ ಮಗನನ್ನು ಪಡೆದ ತಂದೆ-ತಾಯಿಗಳ ಪುಣ್ಯ ವಿನ್ನೆಂತಹದೋ, ಅದೆಲ್ಲ ನಮ್ಮಂಥ ಪಾಮರರಿಗೆ ತಿಳಿಯುವದಸಾಧ್ಯವೇ ಸರಿ. ಅಂತೂ ಲಕ್ಷ್ಮೀನಾರಾಯಣನೀಗ ಸ್ವರ್ಣವರ್ಣತೀರ್ಥರ ಶಿಷ್ಯನಾ ದನು. ಭೋ ಕುಮಾರಾ! ಲಕ್ಷ್ಮೀನಾರಾಯಣಾ! ಇಂದಿಗೆ ನೀನು ಧನ್ಯ

ನಾದಿ. ನಿನ್ನ ಜನ್ಮವು ಸಾರ್ಥಕವಾಯಿತು ಇಂಥಾ ಸತ್ಸಹವಾಸವನ್ನು ಪಾಮರರಾದ ನಮಗೂ-ನಮ್ಮ ವಾಚಕ ವರ್ಗಕ್ಕೂ ಹಿಂದೇ ಹಿಂದುಬಾರಿ ದಯಪಾಲಿಸಿ ನಮ್ಮೀ ಜನ್ಮವನ್ನು ಸಾರ್ಥಕಪಡಿಸಲಾರೆಯಾ? ಹಗಲಿರಳೂ ನಿನ್ನನ್ನು ಅನನ್ಯ ಭಾವದಿಂದ ಸೆರಗೊಡ್ಡಿ ಬೇಡಿಕೊಳ್ಳುತ್ತಿರುವೆವು ಬಡ ಭಕ್ತರ ಮೇಲಿಷ್ಟು ದಯೆದೋರು-ದಯೆದೋರು. ನಿನಗೆ ಅನಂತಾನಂತ ನಮಸ್ಕಾರಗಳಿರಲಿ.

ಸ್ವರ್ಣವರ್ಣತೀರ್ಥರು ಹುಡುಗನನ್ನು ಮಠದಸಂಗಡ ಕರಕೊಂಡು ಸಂಚಾರಕ್ಕೆ ನಡೆದರು. ಕೆಲವು ದಿನಗಳು ಹೋದವು. ಈಗ ಲಕ್ಷ್ಮೀ ನಾರಾಯಣನಿಗೆ ಏಳು ವರ್ಷ. 'ವಿದ್ಯಾಕಾಮಂತು ಸಪ್ತಮೇ' ಅಂದರೆ ವಿದ್ಯಾಪೇಕ್ಷಿಯಾದವನು ಏಳನೆಯ ವರ್ಷದಲ್ಲಿ ಉಪನಯನ ಮಾಡಬೇಕೆಂಬ ಶಾಸ್ತ್ರವಿಧಿಗನುಸಾರವಾಗಿ ಶ್ರೀಗಳವರು ಆತನ ಉಪನಯನವನ್ನು ಮಾಡಿಸಿ, ವಿದ್ಯಾಭ್ಯಾಸವನ್ನು ಆರಂಭಿಸಿದರು. ಈಗಿನ ಇಪ್ಪತ್ತನೆಯ ಶತಮಾನದಲ್ಲಾದರೋ ಇದೊಂದು ನಮಗೆ ನೂತನವಾಗಿ-ಆಶ್ಚರ್ಯವಾಗಿ ಕಾಣಬರುತ್ತಿರುವದು; ಆದರೆ ಪ್ರಾಚೀನಕಾಲದಲ್ಲಿ ಹೀಗಿರಲಿಲ್ಲ. ಹುಡುಗರಿಗೆ ಐದನೆಯ ವರ್ಷದಲ್ಲಿ ಅಥವಾ ಏಳನೆಯ ವರ್ಷದಲ್ಲಿ ಉಪನಯನ ಮಾಡಿ ಮುಂದೆ ಹನ್ನೆರಡು ವರ್ಷ ಗುರುಕುಲವಾಸದಲ್ಲಿಟ್ಟು ವಿದ್ಯಾವ್ಯಾಸಂಗ ಮಾಡಿಸುತ್ತಿದ್ದರು. ಈಗಿನ ಕಾಲದಲ್ಲಿ ಅದೆಲ್ಲ ಬದಲಾಗಿ ನಮ್ಮ ಬಾಲಕರು ಹದಿಮೂರು-ಹದಿನಾಲ್ಕು ವರ್ಷಕ್ಕೆ ಉಪನಯನ ಮಾಡಿಕೊಂಡು ಹೋಟಲು ಚಹಾ ಕಾಫಿ ಕ್ಲಬ್ಬುಗಳಲ್ಲಿ ವಾಸಿಸುತ್ತ ಅಗ್ನಿಹೋತ್ರವನ್ನು ಸದಾ ಬಾಯಲ್ಲಿಯೇ ಇಟ್ಟುಕೊಂಡು(ಬೀಡಿ-ಸಿಗರೇಟ ಸೇದುತ್ತ) ಹುರುಳಿಲ್ಲದ ವಿದ್ಯಾವ್ಯಾಸಂಗದಲ್ಲಿ ತೊಡಗುವರು. ಅಂತೆಯೇ ಆಗಿನ ಕಾಲದಂಥ ವಿದ್ವಾಂಸರೂ-ವಿರಕ್ತರೂ-ಭಗವದ್ಭಕ್ತರೂ ಈಗ ವಿರಳರಾಗುತ್ತ ನಡೆದಿರುವರೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಕರ್ಣಾಟಕ ವಿಭೂತಿಗಳೆಂದು ಪ್ರಸಿದ್ಧರಾದ ಶ್ರೀವ್ಯಾಸರಾಯರವರಿಗೆ ಐದನೆಯ ವರ್ಷದಲ್ಲಿಯೇ ಉಪನಯನವಾಗಿ ಏಳನೆಯ ವರ್ಷದಲ್ಲಿ ಸಂನ್ಯಾಸಾಶ್ರಮವಾಗಿ ಹೋಯಿತು. ಇದೇ ಮೇರೆಗೆ ಉತ್ತರಾದಿ ಮಠದ ಶ್ರೀರಘೂತ್ತಮ ತೀರ್ಥರೆಂಬವರಿಗೂ(ರಘುವರ್ಯತೀರ್ಥರ ಶಿಷ್ಯರು. ಭಾವಬೋಧಕಾರರು.) ಎಂಟನೆಯ ವರ್ಷದಲ್ಲಿಯೇ ಆಶ್ರಮವಾಯಿತಂತೆ! ಇವೆಲ್ಲ ನಮಗೀಗ ಕಟ್ಟುಕತೆಗಳಾಗಿ ಕಾಣುತಿರುವವು. ಆಗಲಿ, ಏನೋ ಅದೊಂದು

ಕಾಲದ ಮಾತಾಗಿ ಹೋಯಿತು. ಈಗಿನ ಕಾಲವೇ ಬೇರೆ. ಈಗಿನ ಮಾತೇ ಬೇರೆ. ಕಾಲಾಯ ತಸ್ಮೈ ನಮಃ

ಲಕ್ಷ್ಮೀನಾರಾಯಣನೀಗ ದನಕಾಯುವ ಹುಡುಗನಲ್ಲ. ಆತನೊಬ್ಬ ಬಾಲಬ್ರಹ್ಮಚಾರಿ. ಸ್ವಾಮಿಗಳವರ ಶಿಷ್ಯ. ಅದರಲ್ಲಿಯೂ ಅತ್ಯಂತ ಪ್ರೀತಿಯ ಶಿಷ್ಯ. ಮೇಲಾಗಿ ಅವರನುಗ್ರಹಕ್ಕೆ ಪಾತ್ರನಾದವನು. ಅಂದಮೇಲೆ ಕೇಳುವದೇನ-? ವಿದ್ಯೆ ಕಲಿಯಲಿಕ್ಕೆ ಆರಂಭ ಮಾಡಿದ್ದೊಂದೇ ತಡ. ದೇವತಾನುಗ್ರಹದಿಂದ ಅಲ್ಪಾವಧಿಯಲ್ಲಿಯೇ ಸಕಲ ಶಾಸ್ತ್ರಗಳೂ ಕರತಲಾಮಲಕವಾಗಿ ಹೋದವು. ಹಿಂದಕ್ಕೆ ಶ್ರೀ ಕೃಷ್ಣಮೂರ್ತಿಯು ಸಾಂದೀಪಿನ್ಯಾಚಾರ್ಯರಲ್ಲಿ ವಿದ್ಯೆ ಕಲಿಯಲಿಕ್ಕೆ ನಿಂತಂತಾಯಿತು. ಹೀಗೆ ವಾಯುವೇಗ-ಮನೋವೇಗದಿಂದ ವಿದ್ಯೆ ಕಲಿಯುವದು ಅನೇಕ ಮಹನ್ನೀಯರಲ್ಲಿ ಕಂಡು ಬಂದಿರುತ್ತದೆ. ಇದಕ್ಕೆಲ್ಲ ಅವರವರ ಜನ್ಮಾಂತರ ಸುಕೃತವೇ ಕಾರಣವೋ ಅಥವಾ ದೇವಾಂಶರಾಗಿ ಹುಟ್ಟಿ ಬರುತ್ತಿರುವದೇ ಕಾರಣವೋ, ಅದೆಲ್ಲ ನಮ್ಮಂಥ ಘೃತಬುದ್ಧಿಯವರಿಗೆ ಹೇಗೆ ತಿಳಿಯಬೇಕು? ಕೇವಲ ಲಕ್ಷ್ಮೀಪುತ್ರರಾಗಿ ಸರದಾರ ವಂಶದಲ್ಲಿ ಹುಟ್ಟಿ ರಾವುತರಾಗಿ ಮೆರೆದ ಧೋಂಡೋ ರಘುನಾಥರೆಂಬವರು ಶ್ರೀ ಅಕ್ಷೋಭ್ಯತೀರ್ಥರ ದರ್ಶನಮಾತ್ರದಿಂದಲೇ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ, ಜಯತೀರ್ಥ ‡ ರೆಂಬ ಹೆಸರಿನಿಂದ ಪ್ರಖ್ಯಾತರಾಗಿ ಶ್ರೀಮದಾಚಾರ್ಯರ ಹದಿನೆಂಟು ಗ್ರಂಥಗಳಿಗೆ ಟಿಪ್ಪಣಿಯನ್ನು ರಚಿಸಲಿಲ್ಲವೇ? ಶ್ರೀ ಶಂಕರಾಚಾರ್ಯರು-ಮಧ್ವಾಚಾರ್ಯರು ಮೊದಲಾದವರು ಅಲ್ಪಾವಧಿಯಲ್ಲಿಯೇ ಲೋಕ ವಿಖ್ಯಾತರಾದ ವಿದ್ವಾಂಸರೆನಿಸಲಿಲ್ಲವೇ? ಹೀಗೆಯೇ ಲಕ್ಷ್ಮೀನಾರಾಯಣನಾದರೂ ತುಸ ದಿವಸದಲ್ಲಿಯೇ ದೊಡ್ಡ ಪಂಡಿನಾದನು. ಇಷ್ಟೇ ಅಲ್ಲ, ಶ್ರೀ ಶುಕಾಚಾರ್ಯರಂತೆ ಅತ್ಯಂತ ವಿರಕ್ತನೂ ಆದನು.

ಜಗತ್ತಿನಲ್ಲಿ ಪಂಡಿತರು ಬೇಕಾದಷ್ಟು ಮಂದಿ ಸಿಕ್ಕಬಹುದು; ಆದರೆ ನಿಜವಾದ ವೈರಾಗ್ಯಶಾಲಿಗಳು ಮಾತ್ರ ಎಲ್ಲಿಯೋ ಅಪರೂಪವೇ ಸರಿ.

‡ ಈ ಮಹಾತ್ಮರ ಚರಿತ್ರವೊಂದನ್ನು 'ಸಾಹಿತ್ಯ'ವೆಂಬ ತ್ರೈಮಾಸಿಕಕ್ಕೆ ಕೊಟ್ಟಿರುವೆವು. (ಪಿ ವಿ. ಕೆ. ಪಟೇಲ್, ವ್ಯವಸ್ಥಾಪಕ ಸಾಹಿತ್ಯ ಕಾರ್ಯಾಲಯ ಪೋಸ್ಟ ಷಡ್ಡೆಪ'ಡಾಲ ದ. ಕಾನಡಾ ಜಿಲ್ಲಾ) ಶ್ರಮ.ಶಃ ಅದೀಗ ಅಚ್ಚಾಗುತ್ತಲಿರುವದು.

ಯಾಕಂದರೆ ವೈರಾಗ್ಯದ ಮಾತು ಬಾಯಿಂದ ಹೇಳುವದಕ್ಕೆ ಸುಲಭವೇ ಹೊರತು, ನಡೆಯಿಂದ ನಡೆದು ತೋರಿಸುವದು ಬಲು ಬಿಗಿಯಾದದ್ದು. ಆದುದರಿಂದಲೇ—

ಪರೋಪದೇಶೇಪಾಂಡಿತ್ಯಂ ಜನಾಃ ಸರ್ವೇಪಿ ಪಂಡಿತಾಃ||
ತದನುಷ್ಠಾನಸಮಯೇ ಮುನಯೋಪಿ ನ ಪಂಡಿತಾಃ ||

(ಪರರಿಗೆ ಉಪದೇಶ ಮಾಡುವದಕ್ಕೆ ಎಲ್ಲರೂ ಪಂಡಿತರು; ಆದರೆ ಅದನ್ನೇ ಅನುಷ್ಠಾನದಲ್ಲಿ ತಂದು ತೋರಿಸುವ ಪ್ರಸಂಗ ಬಂದರೆ, ಮಹಾನ್ ಮಹಾನ್ ಋಷಿಗಳೂ ಕೂಡ ಅಪಂಡಿತರೇ ಸರಿ )

ಎಂಬದಾಗಿ ಹಿರಿಯರು ಹಿಕ್ಕಣಿಸಿರುವರು. ಇಂಥ ವೈರಾಗ್ಯಶಾಲಿಗಳೇ ದೇಶದಲ್ಲಿ ಬಹಳ. ಶ್ರೀ ನರಹರಿತೀರ್ಥಸ್ವಾಮಿಗಳವರು ಹೇಳಿದಂತೆ: "ಏಕಾಂತದಲಿ ಧನದ ಗೋಷ್ಠಿ | ಲೋಕಾಂತದಲಿ ವೈರಾಗ್ಯದ ಗೋಷ್ಠಿ|| ಶ್ರೀಕಾಂತನ ಸೇವೆಗೆ ಅನುಮಾನಾ | ಭೂಕಾಂತನ ಸೇವೆಗೆ ಸನ್ಮಾನಾ||" ಈ ತರದ ಡಾಂಭಿಕ ವೃತ್ತಿಯುವರೂ—ಅನುಭವಾಮೃತದ ವಚನದಂತೆ: '.....ಮಹಾತ್ಮರು| ಬರಿದೆ ಬ್ರಹ್ಮವ ನುಡಿವರಲ್ಲದೆ ಬಿಡರು ಮಡದಿಯರ||' ಈ ತರದ ಮಾತಿನ ಮಹಾತ್ಮರೂ ವಿಶೇಷವಾಗಿರುವರು. ಇವರು ಬಾಯಿಂದ ಬೇಕಾದಷ್ಟು ಉಚ್ಚವಾದ ವೇದಾಂತದ ತತ್ವಗಳನ್ನು ಹೇಳುತ್ತಿರುವರೇ ಹೊರತು, ನಡೆಯಲ್ಲಿ ಸುತರಾಂ ಅದರ ಗಂಧವೇ ಇಲ್ಲ. ಇಂಥ ವೈರಾಗ್ಯಕ್ಕೇನೇ ಶ್ರೀ ಪುರಂದರದಾಸರು:—

"ಉದರ ವೈರಾಗ್ಯವಿದು | ನಮ್ಮ | ಪದುಮನಾಭನಲ್ಲಿ
ಲೇಶ ಭಕುತಿಯಿಲ್ಲ || ಉದರ ವೈರಾಗ್ಯವಿದು"||

ಉದರ ವೈರಾಗ್ಯವೆಂದು ಹೆಸರು ಇಟ್ಟಿರುವರು. ಹೀಗೆ ವೇಷದ ವೈರಾಗ್ಯದಿಂದ ಪ್ರಯೋಜನವೇನು? ಯಾವನು ಅರಿಷಡ್ವರ್ಗಗಳನ್ನು ಜಯಿಸಿರುವನೋ, ಯಾವನು ಐಹಿಕ ವಿಷಯವಾಸನೆಯನ್ನು ತ್ಯಜಿಸಿ ಬಿಟ್ಟಿರುವನೋ ಅವನೇ ನಿಜವಾದ ವೈರಾಗ್ಯಶಾಲಿ! ಅವನೇ ಮಹಾತ್ಮ!

ಬರೀ ಪಾಂಡಿತ್ಯದಿಂದಾಗಲಿ, ವಯಸ್ಸಿನಿಂದಾಗಲಿ ಇದು ಹುಟ್ಟಲಾರದು. ಇದಕ್ಕೆ ಜನ್ಮಾಂತರೀಯ ಸುಕೃತವಿಶೇಷವೇ ಬೇಕು. ಇದರೊಂದಿಗೆ ಪಾಂಡಿತ್ಯವೂ ಹಿಂದು ಸೇರಿಕೊಂಡಿದರೆ ಚಿನ್ನಕ್ಕೆ ಕುಂದಣ ಹಾಕಿದಂತಾಗುವದು. ಸುಭಾಷಿತಕಾರರಾದರೋ ಇಂಥವರನ್ನು:—

“ಪ್ರಭುರ್ವಿವೇಕೀ ಪ್ರವದಾ ಸುಶೀಲಾ ತುರಂಗಮಃಶತ್ರುನಿಪಾತಧೀರಃ॥
ವಿದ್ವಾನ್ವಿರಾಗೀ ಧನಿಕಪ್ರದಾತಾ ಪಂಚೈವರತ್ನಾನಿ ಮನುಷ್ಯಲೋಕೇ ॥”

ಎಂಬೀ ರೀತಿಯಾಗಿ ಮನುಷ್ಯಲೋಕದ ಅಪೂರ್ವರತ್ನಗಳೆಂದು ಬಣ್ಣಿಸಿರುವರು. ಅಂದಮೇಲೆ ಕೇವಲ ಚಿಕ್ಕವಯಸ್ಸಿನವನಾಗಿರುವಾಗಲೇ ಅತ್ಯಧಿಕವಾದ ಪಾಂಡಿತ್ಯವನ್ನೂ ನಿಜವಾದ ವೈರಾಗ್ಯವನ್ನೂ ಸಂಪಾದಿಸಿದ ನಮ್ಮ ಲಕ್ಷ್ಮೀನಾರಾಯಣನು, ಕರ್ಣಾಟಕದಲ್ಲಿಯ ಒಂದು ದಿವ್ಯ ತೇಜೋರತ್ನವೆಂದು ಹೇಳಿದರೆ ಅತಿಶಯವೇನು? ಈತನು ಮುಂದೆ ಮಹಾ ಮಹಿಮನಾದ ಭಗವದ್ಭಕ್ತನಾಗಬೇಕೆಂದು ದೇವರ ಸಂಕಲ್ಪವಿದ್ದುದರಿಂದಲೇ ಇಷ್ಟು ಚಿಕ್ಕಂದಿನಲ್ಲಿ ವೈರಾಗ್ಯವು ಅಂಕುರಿಸಿತೆನ್ನಬಹುದು.

ನಮ್ಮೀ ಕರ್ಮಭೂಮಿಯಲ್ಲಿ ಸಜ್ಜನರ ಉದ್ಧಾರಕ್ಕೋಸ್ಕರ ಭಗವಂತನು ಆಗಾಗ್ಗೆ ಇಂಥಾ ಅವತಾರಿಕ ಪುರುಷರನ್ನು ಹುಟ್ಟಿಸಿ ನಮಗೆ ಮಾರ್ಗದರ್ಶಕರನ್ನಾಗಿ ಮಾಡುತ್ತಿದ್ದರೂ, ಮಂದಮತಿಗಳಾದ ನಾವು ಅವರೂ ನಮ್ಮಂತೆ ಸಾಮಾನ್ಯ ನರರೆಂದೇ ಬಗೆದು ಭಕ್ತಿ-ವಿಶ್ವಾಸಗಳನ್ನಿಡದೆ, ಕೆಟ್ಟು ಹೋಗುತ್ತಿರುವೆವು. ಇದೇ ಅಜ್ಞಾನ! ಇದೇ ಮಾಯೆ!

“ಹರಿಭಕುತಿ ಉಳ್ಳವರ ಶರೀರವೇ ಕುರುಕ್ಷೇತ್ರ | ಅವರು |
ನರರೆಂದು ಬಗೆವರೇ ನರಕಪಾಪಿಗಳು॥ ”
(ಪು. ದಾಸರು.)

ಹೀಗೆ ಅನೇಕ ಮಹನೀಯರು ಉಪದೇಶಿಸಿರುವದರಿಂದ ನಾವು ಅವರ ಮಾತಿನಲ್ಲಿ ವಿಶ್ವಾಸವಿಟ್ಟು ಇಂಥವರ ಗುಣಾನುಕೀರ್ತನ ಮಾಡಿ-ಚರಿತಾಮೃತವನ್ನು ಪಾನ ಮಾಡಿ ಧನ್ಯರಾಗಬೇಕು; ಪುನೀತರಾಗಬೇಕು! ಇದೇ ನಮ್ಮೀ ಮನುಷ್ಯಜನ್ಮದ ಸಾರ್ಥಕತೆಯು!

ಇಂತು ಲಕ್ಷ್ಮೀನಾರಾಯಣನು ದೊಡ್ಡ ಪಂಡಿತನೂ, ವೈರಾಗ್ಯಶಾಲಿಯೂ ಆದುದನ್ನು ನೋಡಿ, ಸ್ವರ್ಣವರ್ಣತೀರ್ಥರು ಕೂಡಲೆ ಆತನಿಗೆ ಸಂನ್ಯಾಸಾಶ್ರಮವನ್ನು ಕೊಟ್ಟು, ಲಕ್ಷ್ಮೀನಾರಾಯಣಮುನಿಯೆಂಬ ಹೆಸರಿಟ್ಟು, ಶ್ರೀಮನ್ಮಂತ್ರಾಲಯಮಠದ ವಿಬುಧೇಂದ್ರತೀರ್ಥರ ಬಳಿಯಲ್ಲಿ ಉಚ್ಚತರಗತಿಯ ವಿದ್ಯಾಭ್ಯಾಸಕ್ಕಿಟ್ಟರು. ವಾಚಕರೇ! ಇಲ್ಲಿಯವರೆಗೆ ನಾವು ಯಾರಿಗೆ ಲಕ್ಷ್ಮೀನಾರಾಯಣನೆಂದು ಏಕವಚನದಿಂದ ಕರೆಯುತ್ತಿದ್ದೆವೋ, ಆತನೇ ಈಗ ಯತ್ಯಾಶ್ರಮವನ್ನು ಧರಿಸಿ, ವಿಬುಧೇಂದ್ರತೀರ್ಥ

ವಿಶ್ವವಿದ್ಯಾಲಯದ ವಿದ್ಯಾರ್ಥಿಯಾಗಿ ಕುಳಿತಿರುವನು; ಮತ್ತು ರಮೇಶ ಚಂದ್ರದತ್ತನು ರಾಮಕೃಷ್ಣಪರಮಹಂಸರಿಂದ ವಿವೇಕಾನಂದರೆಂಬ ಹೆಸರನ್ನು ಧರಿಸಿದಂತೆ, ಈತನೂ ಸ್ವರ್ಣವರ್ಣ ತೀರ್ಥಗುರುಗಳಿಂದ ಮುನಿಯೆಂಬ ಗೌರವದ ಪ್ರಶಸ್ತಿಪತ್ರಿಕೆಯನ್ನು(ಸರ್ಟಿಫಿಕೇಟು)ಪಡೆದುಕೊಂಡಿರುವನು. ಅಂದಬಳಿಕ ನಾವಾದರೂ ಇನ್ನು ಈತನನ್ನು ಬಹುವಚನದಿಂದಲೇ ಗೌರವಿಸುವದು ಯುಕ್ತವಾದದ್ದಲ್ಲವೇ?

'ಕಾಷಾಯದಂಡಮಾತ್ರೇಣ ಯತಿಃ ಪೂಜ್ಯೋ ನ ಸಂಶಯಃ'||

'ಕಾವೀಬಟ್ಟೆ-ದಂಡಕಾಷ್ಠ ಮಾತ್ರನಾದ ಯತಿಯೇ ನಮಗೆ ಪೂಜ್ಯನಾಗಿರುವಲ್ಲಿ ಇವರನ್ನು ಕೇಳತಕ್ಕದ್ದೇನು?' ಇರಲಿ.

ವಿಬುಧೇಂದ್ರ ತೀರ್ಥರೆಂದರೆ ಸಾಮಾನ್ಯರಾದವರಲ್ಲ. ದಿಗ್ದಂತಿಗಳಾದ ಪಂಡಿತರು. ಪಾಂಡಿತ್ಯದ ಬಲದಿಂದ ಬೇರೊಂದು ಸ್ವತಂತ್ರವಾದ ಮಠವನ್ನೇ ಸ್ಥಾಪಿಸಿದಂಥ ಅಗಾಧ ಮಹಿಮಾಶಾಲಿಗಳು. (ಇವರೇ ಮಂತ್ರಾಲಯಮಠದ ಉತ್ಪಾದಕರು.) ಇಂಥವರ ಬಳಿಯಲ್ಲಿದ್ದ ಮೇಲೆ ಕೇಳಬೇಕೇನು? ಉಕ್ಕಿನ ಹದಸಾದ ಚೂರಿಯನ್ನು ಸಾಣೆ ಹಿಡಿಸಿದಂತಾಯಿತು. ಲಕ್ಷ್ಮೀನಾರಾಯಣ ಮುನಿಗಳು ಸಕಲ ವೇದಶಾಸ್ತ್ರಗಳನ್ನೂ ಕರತಲಾಮಲಕವಾಗಿ ಮಾಡಿಕೊಂಡು ಬಿಟ್ಟರು. ಗುರುವಿನಂತೆ ಶಿಷ್ಯನೆಂಬ ಮಾತು ಇವರಲ್ಲಿ ಅನ್ವರ್ಥಕವಾಗಿತ್ತು.

ಹಿಂದಾನೊಂದು ದಿವಸ ಶಿಷ್ಯರೊಂದಿಗೆ ಶ್ರೀ ವಿಬುಧೇಂದ್ರ ಯತಿಗಳು ಸಂಚಾರಕ್ಕೆ ಹೊರಟು, ಕೃಷ್ಣಾತೀರದಲ್ಲಿರುವ 'ಕೊಪ್ರ' ಎಂಬ ಗ್ರಾಮಕ್ಕೆ ಬಂದರು. ಇದೊಂದು ದಿವ್ಯವಾದ ಕ್ಷೇತ್ರ. ಇಲ್ಲಿ ಶ್ರೀ ನರಸಿಂಹದೇವರ ದೇವಸ್ಥಾನವು ಪ್ರಸಿದ್ಧವುಂಟು.

ಇದೇ ಸುಮಾರಕ್ಕೆ ಉತ್ತರಾದಿ ಮಠದೊಳಗಿನ ಪ್ರಖ್ಯಾತ ಯತಿಗಳಾದ ಶ್ರೀ ರಘುನಾಥ ತೀರ್ಥರೆಂಬವರು † ಸಂಚಾರ ಮಾಡುತ್ತಾ

† ಇವರು ಶ್ರೀಮದುತ್ತರಾದಿ ಮಠದ ೧೨ನೆಯ ಯತಿಗಳು. ಇವರ ಪೂರ್ವಾಶ್ರಮದ ಹೆಸರು ವಿಷ್ಣುಶಾಸ್ತ್ರೀ ಎಂದಿತ್ತು. ಇವರು ಬಹು ಅಂತರ್ಮುಖಿಗಳಾದ ತಪಸ್ವಿಗಳು. ಘನಪಂಡಿತರು. ಆದರೂ—'ಪ್ರಾಚೀನಕರ್ಮವು ಬಿಡಲರಿಯದೋ,' ಎಂಬ ಕನಕದಾಸನ ಉಕ್ತಿಯಂತೆ ದುಃಖಪ್ರಾರಬ್ಧದಿಂದ ಇವರಿಗೆ ಆದರು ರೋಗವು ಗಂಟು ಬಿದ್ದಿತ್ತು. ದೇವರ ಪೂಜೆ ಮಾಡುವಾಗ

ಮಾಡುತ್ತಾ ಇದೇ ಗ್ರಾಮಕ್ಕೆ ಬಂದು ಸೇರಿದರು. ವಿಬುಧೇಂದ್ರತೀರ್ಥರು ಗುರುಗಳಂತೆ ಇವರಿಗೆ ಆದರ-ಸತ್ಕಾರ ಮಾಡಿ ಪರಸ್ಪರ ಪಂಕ್ತಿಭೋಜನದಿಂದ ಆನಂದಪಡಿಸಿದರು. ಪೂರ್ವಕಾಲದಲ್ಲಿ ಮಠಾಧಿಪತಿಗಳು ಯೋಗ್ಯತಾ ಪಕ್ಷಪಾತಿಗಳಾಗಿ ಪರಸ್ಪರ ಸ್ನೇಹವುಳ್ಳವರಾಗಿಯೇ ಇದ್ದರೆಂಬುವದಕ್ಕೆ ಇದೊಂದು ದೃಷ್ಟಾಂತವಾಗಿರುವದು. ಇರಲಿ.

ಆಗ ರಘುನಾಥತೀರ್ಥರು ವಿಬುಧೇಂದ್ರರ ಶಿಷ್ಯರನ್ನು ಕುರಿತು:- ಏನೇನು ಓದಿರುವಿರೆಂದು ಕೇಳಿದರು. ಕೂಡಲೆ ನಮ್ಮ ಲಕ್ಷ್ಮೀನಾರಾಯಣ ಮುನಿಗಳು ವಿನಯದಿಂದ ಮುಂದೆ ಬಂದು ಗುರುಗಳು ಹೇಳಿದಂಥ ಪೂರ್ವಪಕ್ಷ ಸಮಾಧಾನಸಹಿತ ಆರುನೂರು ಗ್ರಂಥಗಳನ್ನು ಅನುವಾದ ಮಾಡಿದ್ದಲ್ಲದೆ ಸಮಗ್ರ ಸುಧಾ ಗ್ರಂಥವನ್ನೇ ಬಾಯಿಪಾಠ ಹೇಳಿಬಿಟ್ಟರು! ಸುಧಾಗ್ರಂಥವೆಂದರೆ ನಮ್ಮ ಮಧ್ವಸಿದ್ಧಾಂತ ಗ್ರಂಥಗಳಲ್ಲಿಯೇ ಮಹೋನ್ನತವಾದದ್ದು. ಅತಿ ಶ್ರೇಷ್ಠವಾದದ್ದು. ಇಂಥಾದ್ದನ್ನೇ ಇವರು ಮುಖೋದ್ಗತವಾಗಿ ಹೇಳಿದ ಮೇಲೆ ಇವರ ಪಾಂಡಿತ್ಯವನ್ನೆಷ್ಟೆಂದು ಬಣ್ಣಿಸೋಣ! ಹೀಗೆ ಲಕ್ಷ್ಮೀನಾರಾಯಣಮುನಿಗಳು ಸುಧಾಗ್ರಂಥಹೇಳಿದ್ದನ್ನು ಶ್ರೀನಿಧಿತೀರ್ಥರೆಂಬವರು ತಾವು ರಚಿಸಿದ ಶ್ರೀಪಾದರಾಜಾಷ್ಟಕದಲ್ಲಿ ಹೀಗೆ ಬಣ್ಣಿಸಿರುತ್ತಾರೆ:—

ಶ್ರೀಮಚ್ಛ್ರೀಪಾದರಾಜಪ್ರಮುಖಯತಿವರಾನಾದರಾಧೀತಶಾಸ್ತ್ರಾನ್ |
ನಾಹೂಯಾತಿಪ್ರಮೋದಾತ್ಸ್ವದತಭವತಾಂತಾರದೇವಾದ್ಯಶಿಷ್ಯೈಃ ||

ಮಾತ್ರ ಕಾಪೀನಾಟಿಯನ್ನು ಸುತ್ತಿಟ್ಟುಬಿಡುವರು. ಅದೇ ನಡುಗುತ್ತಿತ್ತಂತೆ. ಉಳಿದ ವೇಳೆಯಲ್ಲಿ ಯಾವಾಗಲೂ ನಡುಗುತ್ತಿದ್ದರು. ಯಾರು ಏನು ಪ್ರಾಷ್ಟಾನ್ನ ಭಿಕ್ಷೆ ಮಾಡಿಸಿದರೂ ಏನಾದರೂ ತೊಂದರೆ ಒಂದು ಇವರಿಗೆ ಕಡೆಗೆ ಅನ್ನ ಒಂದು ಮೆಣಸಿನ ನೀರು ಉಣ್ಣುವ ಹೊತ್ತೇ ಒರುತ್ತಿತ್ತು

ಇವರು ಶಾ. ಶಕ ೧೩೬೬ನೇ ರಕ್ತಾಕ್ಷಿ ಸಂ। ಕಾರ್ತಿಕ ಬಹುಳ ೪ ರಿಂದ ೫೮ ವರ್ಷ-೨೭ ದಿವಸ ಆಳಿ ಶಾ. ಶಕ ೧೪೨೪ನೇ ದುಂದುಭಿ ಸಂ|ರ ಮಾರ್ಗಶಿರ ವದ್ಯ ೧ ದಿವಸ ಮೋಖೇಡೆಯಲ್ಲಿ ವೃಂದಾವನಸ್ಥರಾದರು. ಇವರ ವೃಂದಾವನವು ಶ್ರೀ ಟೀಕಾಚಾರ್ಯರ ವೃಂದಾವನದ ಎಡಮಗ್ಗುಲಲ್ಲಿ ಅಂದರೆ ಉತ್ತರದ ಕಡೆಗೆ ಇರುವದು.

ಯಾವತ್ಸಾಮರ್ಥ್ಯಮುಕ್ತ್ಯೇತ್ಯುದಿತವತಿಗುರೌಪ್ರಾಗುಪ್ಯನ್ಯಸ್ತವಾನ್ಯಃ।
ಶ್ರೀಮಾನಾದ್ಯಂತಯುಕ್ತ್ಯಾಂಬುಧಸದಸಿಸುಧಾಸೇವತಾನ್ಮಾಂಯತೀಂದ್ರಃ॥
(ಶ್ರೀಪಾದರಾಜಾಷ್ಟಕ)

ಇವರ ಅಪ್ರತಿಭವಾದ ಮೇಧಾಶಕ್ತಿಯನ್ನು ನೋಡಿ ಅಂತಹ ರಘುನಾಥತೀರ್ಥರೂ ಬೆರಗಾದರು. ಅವರ ಸಂತೋಷವನ್ನು ಹೇಳತೀರದು. ಕಣ್ಣುಗಳಿಂದ ಆನಂದಾಶ್ರುಗಳು ಸುರಿದು ಹೋದವು. ಭಲೆ! ಶಹಬಾಸ್! ಇದ್ದರಿಂಥಾ ಶಿಷ್ಯರಿರಬೇಕು. 'ಶಿಷ್ಯಾದಿಚ್ಛೇತ್ ಪರಾಜಯಂ' ಎಂಬಂತೆ ನಿಮ್ಮ ಗುರುಗಳಾದ ವಿಬುಧೇಂದ್ರತೀರ್ಥರು ಏನು ಧನ್ಯರೋ! ಎಂಬದಾಗಿ ಕೊಂಡಾಡಹತ್ತಿದರು. ಆಗ ಲಕ್ಷ್ಮೀನಾರಾಯಣ ಮುನಿಗಳು ನಮ್ರತೆಯಿಂದ:—"ಏನಾದರೇನು? ನಾವು ಅನಾಮಧೇಯರಾದ ಬಿಡಿ ಸಂನ್ಯಾಸಿಗಳೇ ಸರಿ. ತಾವಾದರೋ ಶ್ರೀಪಾದಂಗಳವರು," ಎಂದು ನುಡಿಯಲು, ರಘುನಾಥತೀರ್ಥರು ಮುಗುಳು ನಗೆಯಿಂದ:—"ಅಪ್ಪಾ, ಮಗೂ, ನೀನು ಸಾಮಾನ್ಯ ಬಾಲಕನಲ್ಲಪ್ಪಾ! ಸುರಗುರುವನ್ನೂ ಮೀರಿದ ನಿನ್ನ ಯೋಗ್ಯತೆಯನ್ನು ಎಷ್ಟೆಂದು ಹೇಳಲಿ? ನಾವು ಶ್ರೀಪಾದಂಗಳು ಮಾತ್ರ; ಆದರೆ ನೀನು "ಶ್ರೀಪಾದರಾಜ"! ಹೀಗೆಂದು ಅತ್ಯಾಪೂರ್ವವಾದ ಬಿರುದನ್ನು ಕೊಟ್ಟು ತಮ್ಮಲ್ಲಿಯ ಹೊಗಳುಭಟ್ಟರಿಂದ ಹೊಗಳಿಸಿಬಿಟ್ಟರು.

ಈ ಪ್ರಕಾರ ಲಕ್ಷ್ಮೀನಾರಾಯಣ ಮುನಿಗಳಿಗೆ (ಶಿರಿನಾರಾಯಣ ಯೋಗಿಗಳಿಗೆ) ಶ್ರೀಪಾದರಾಜರೆಂಬ ಹೆಸರು ಬಂದದ್ದನ್ನು ಬಿದರಹಳ್ಳಿಯ ಆಚಾರ್ಯರ ಶಿಷ್ಯರೊಬ್ಬರು ತಮ್ಮ ಗುರುಕಥಾಕಲ್ಪತರು † ವೆಂಬ ಗ್ರಂಥದಲ್ಲಿ ಸಂಗ್ರಹಿಸಿ ಹೇಳಿರುವರು. ಅದನ್ನೇ ನಾವು ಇಲ್ಲಿ ಬುದ್ಧಿಪೂರ್ವಕವಾಗಿ ವಾಚಕರ ಅವಗಾಹನಕ್ಕೆ ತಂದು ಕೊಡುವೆವು.

† ಶ್ರೀ ಸತ್ಯಬೋಧಸ್ವಾಮಿಗಳವರ ಕಾಲದಲ್ಲಿ ಅವರ ಅಪ್ಪಣೆಯ ಮೇರೆಗೆ ಈ ಗ್ರಂಥವು ಬರೆಯಲ್ಪಟ್ಟಿರುವದು. ಇದರಲ್ಲಿ-ಶ್ರೀಮದಾಚಾರ್ಯರಿಂದ ಆರಂಭಮಾಡಿಕೊಂಡು ಸತ್ಯಬೋಧ ಸ್ವಾಮಿಗಳವರೆವಿಗೆ ಎಲ್ಲಾ ಶ್ರೀಗಳವರ ಚರಿತ್ರವೂ ಅತ್ಯಂತ ವಿಸ್ತಾರವಾಗಿ ವರ್ಣಿತವಾಗಿದೆ. ಇಂಥಾ ಗ್ರಂಥವು ಈ ವರೆಗೂ ಅಚ್ಚಾಗದಿರುವದು ನಮ್ಮ ದುರ್ದೈವವೇ ಸರಿ. ವೈಷ್ಣವಾಭಿಮಾನಿಗಳಾದ ಮಹಾಶಯರು ಯಾರಾದರೂ ಇದನ್ನು ಅಚ್ಚು ಮಾಡಿಸುವವರಿದ್ದರೆ, ಅಂಥವರು ನಮ್ಮ ಕೂಡ ಪತ್ರವ್ಯವಹಾರ ಮಾಡಬೇಕೆಂದು ಪ್ರಾರ್ಥಿಸುವೆವು.

ಕೃತ್ವೈವ ಮದ್ಭುತಂ ಕರ್ಮ ರಘುನಾಥ ಮುನೀಶ್ವರಾಃ
ಜಗ್ಮುಃ ಕೃಷ್ಣಾತೀರಗತಂ ಕೋಪ್ರಗ್ರಾಮಂ ತತಃಪರಂ ||
ತತ್ರೈವ ವಿಬುಧೇಂದ್ರಾಯ ಪ್ಯಾಗತಾಃ ಪೂರ್ವಮೇವಹಿ |
ಲಕ್ಷ್ಮೀನಾರಾಯಣಾಖ್ಯೈಶ್ಚ ಶಿಷ್ಯೈರನ್ಯೈಃ ಸಹಸ್ಥಿತಾಃ ||
ತದಾನೀಂ ರಘುನಾಥಾಖ್ಯ ತೀರ್ಥಾಸ್ತೇಷಾಂ ಸ್ಥಲಂಪ್ರತಿ |
ಭಗವತ್ಪಾದ ದೇವಾರ್ಚ ಸಹಿತಾಯ ಯುರಾದರಾತ್ ||
ತಚ್ಛ್ರುತ್ವಾ ವಿಬುಧೇಂದ್ರಾಸ್ತು ಪ್ರಣಮ್ಯ ರಘುಪುಂಗವಂ |
ರಘುನಾಥಮುನಿಶ್ರೇಷ್ಠೈಃ ಸಾಷ್ಟಾಂಗಂಸುನಮಸ್ಕೃತಾಃ ||
ತೇಭ್ಯಃ ಕೃತ್ವಾಸ್ವಯಂ ಮಾನಂ ಪ್ರೇಮಾಲಿಂಗನ ಪೂರ್ವಕಂ |
ವರಾಸನೇ ಚೋಪವೇಶ್ಯ ಮಹಾಸಂಸ್ಥಾನ ಗೌರವಾತ್ ||
ಕಾರಯಿತ್ವಾ ನಿಜೈರ್ವಿಪ್ರೈಃ ಪಾದಪ್ರಕ್ಷಾಲನಾದಿಕಂ |
ಯೋಗಕ್ಷೇಮಂ ವಿಚಾರ್ಯಾಥ ಗೋಷ್ಠೀಂಚಕ್ರುಃ ಪರಸ್ಪರಂ ||
.... .... .... .... .... ....
ದೃಷ್ಟ್ವಾ ತದುಭಯಂ ಶ್ರೀರಘುನಾಥ ಗುರೂತ್ತಮಾಃ |
ಸಂತುಷ್ಟಾಶ್ಲಾಘಯಾಂ ಚಕ್ರುರ್ಲಕ್ಷ್ಮೀನಾರಾಯಣಾಭಿಧಾನ್ ||
ಭೋ ಭೋ ಭವಂತಃ ಕುಶಲಾಃ ಪರಪಕ್ಷಾನುವಾದನೆ |
ಏವಂಭವದ್ಭಿಃ ಶಾಸ್ತ್ರಾಣ್ಯಭ್ಯಸನೀಯಾನಿ ಸರ್ವದಾ ||
ಇತ್ಥಮುಕ್ತ್ವಾಸ್ತುತೈಃ ಶ್ರೀಮಲ್ಲಕ್ಷ್ಮೀನಾರಾಯಣಾಭಿಧಾಃ |
ಊಚುರ್ಭಗವಂತಃ ಶ್ರೀಪಾದಾನವಯಂ ಭವತಾಂಸಮಾಃ ||
ಇತ್ಯುಕ್ತ್ವಾ ಪುನರೂಚುಸ್ತಂ ಶ್ರೀಪಾದಾರ್ಯೋ........ವಯಂ |
ಯೂಯಂಶ್ರೀಪಾದ ರಾಜಾಸ್ತು ಪಾಂಡಿತ್ಯಾದಿ ಶಯಾದಿಹ ||
ಏವಂತೇಷಾಂ ನಾಮದತ್ವಾ ಗಾಯಕೈಸ್ತು ಸಭಾತಲೆ |
ಘೋಷಯಾಮಾ ಸುರತ್ಯಂತಂ ತೇಷುಪ್ರೇಮಸಮನ್ವಿತಾಃ ||
(ಗುರುಕಥಾಕಲ್ಪತರು ನವಮಃ ಶಾಖಾಸರ್ಗಃ)

ಭೋ ವಾಚಕವೃಂದ! ನೋಡಿದಿರಾ, ಲಕ್ಷ್ಮೀನಾರಾಯಣನ ಅದೃಷ್ಟವನ್ನು! ಯಾವ ಹುಡುಗನು ಈಗ ತುಸ ದಿವಸದ ಹಿಂದೆ ದನಗಾಯಿಯಾಗಿ ಅಡವಿಯಡವಿ ತಿರುಗಾಡುತ್ತಿದ್ದನೋ, ಅಂಥವನೇ ಈಗ ಲಕ್ಷ್ಮೀನಾರಾಯಣಮುನಿ-ಶಿರಿನಾರಾಯಣಯೋಗಿ-ಶ್ರೀಪಾದರಾಜರು ಎಂಬ ಪ್ರ-

ಖ್ಯಾತ ಹೆಸರಿನಿಂದ ಕರೆಯಲ್ಪಡುತ್ತಿರುವನು! 'ದರ್ಶನಾದೇವಸಾಧವಃ' ಎಂಬಂತೆ ದರ್ಶನ ಮಾತ್ರದಿಂದಲೇ ಅಪ್ರತಿಮವಾದ ಫಲವನ್ನು ಕೊಡುವಂಥ ಸಾಧುವರ್ಯರು ಸಂಪೂರ್ಣ ಒಲಿದದ್ದೇ ಆದ ಪಕ್ಷದಲ್ಲಿ, ಇನ್ನೇನು ಕೊಟ್ಟಾರು- ಏನು ಕೊಡಲಿಕ್ಕಿಲ್ಲ! ಹಿಂದಕ್ಕೆ ಸ್ವರ್ಣವರ್ಣ ತೀರ್ಥರು ಶೇಷಗಿರಿಯಪ್ಪ-ಗಿರಿಯಮ್ಮನಿಂದ ಲಕ್ಷ್ಮೀನಾರಾಯಣನನ್ನು ತಮ್ಮ ವಶಕ್ಕೆ ತಕ್ಕೊಂಡು ಬರುವಾಗ ಏನೆಂದು ವಚನ ಕೊಟ್ಟಿದ್ದರೋ, ಅದನ್ನು ಆ ಸತ್ಯಸಂಕಲ್ಪನಾದ ಭಗವಂತನೇ ತನ್ನ ತಲೆಯ ಮೇಲೆ ಹೊತ್ತುಕೊಂಡು ಇಂದಿಗೆ ಪೂರೈಸಿಕೊಟ್ಟನು ಭಕ್ತರೆಂದರೆ ಭಗವಂತನಿಗೆ ಅಷ್ಟೊಂದು ಪ್ರೇಮ. ಅಂತೆಯೇ ಶ್ರೀಪಾದರಾಜರು:—

ರಾಗ | ಭೈರವಿ | ಆದಿತಾಳ.

ನೀನೇಬಲ್ಲಿದನೋರಂಗ ನಿನ್ನ ದಾಸರು ಬಲ್ಲಿದರೋ ||
ನಾನಾತೆರದಿನಿಧಾನಿಸಿ ನೋಡಲು | ನೀನೇ ಭಕುತರಧೀನನಾದಮೇಲೆ ||ಪ||

.... .... .... .... ....

ಖ್ಯಾತಿಯಿಂದಪುರುಹೂತಸಹಿತಸುರ|ವ್ರಾತವುನಿನ್ನನುವಾಲೈಸುತಿರೆ|
ಭೂತಳದೊಳುಸಂಪ್ರೀತಿಯಿಂದಪಾ | ರ್ಥನರಥಕೆ ನೀ ಸೂತನಾದಮೇಲೆ ||

+†+ +†+ +†+ +†+

ತರಳನಗೋಸುಗವಡದುಖಂಬದಿಬಂದು |
ನರಮೃಗವೇಷದಿಭಕುತರ ಸ್ಥಿತಿಗತಿ | ಕರುಣದಿಸಲಹೊ ಶ್ರೀರಂಗವಿಠಲನಿನ್ನ|
ಸ್ಮರಿಪರಮನದಲಿ ಸೆರೆಯಸಿಕ್ಕಮೇಲೆ ||

ಎಂಬದಾಗಿ ಪರಮಾತ್ಮನನ್ನು ಪ್ರಶ್ನೆ ಮಾಡಿರುವರು. ಇರಲಿ. ಅಂದಿನಿಂದ ನಮ್ಮ ಲಕ್ಷ್ಮೀನಾರಾಯಣ ಮುನಿಗಳು ಶ್ರೀಪಾದರಾಜರೆಂಬ ಹೆಸರಿನಿಂದಲೇ ಪ್ರಸಿದ್ಧರಾದರು.

ಇತಿಹಾಸವು ಹೀಗಿದ್ದರೂ—ವಿಜಯನಗರದ ವೀರನರಸಿಂಹನ ಸಿಂಹಾಸನವೇರಿದ್ದರಿಂದಲೇ ಹೀಗೆ ರಾಜರೆಂಬ ಹೆಸರು ಬಂತೆಂದು ಕೆಲವರು ಹೇಳುತ್ತಿರುವರು; ಆದರೆ ಹಾಗೆ ಅನುಮಾನ ಮಾಡಲಿಕ್ಕೆ ಬಲವಾದ ಕಾರಣಗಳೇನೋ ನಮಗೆ ತಿಳಿಯದು. ಸಿಂಹಾಸನದ ಮೇಲೆ ಕುಳಿತದ್ದು ಇವರು ಸಂಸ್ಥಾನಾಧಿಪತಿಗಳಾದ ಮೇಲೆಯೇ ಸರಿ. ಅದಕ್ಕೂ ಎಷ್ಟೋ ಪೂರ್ವದಲ್ಲಿಯೇ ಈ ಹೆಸರು ಅವರಿಗೆ ಬಂದಿರುವದರಿಂದ ಹಾಗೆ

ಅನುಮಾನಿಸಲಿಕ್ಕೆ ಕಾರಣವಿರುವದಿಲ್ಲ ಇದರಂತೆಯೇ ಅಚ್ಯುತರಾಯನ ಸಿಂಹಾಸನವೇರಿದ್ದರಿಂದ ವಾದಿರಾಜರಿಗೆ ರಾಜರೆಂಬ ಹೆಸರು ಬಂತೆಂದು ಹೇಳುತ್ತಿರುವರು; ಆದರೆ ಅವರಿಗಾದರೂ ಶ್ರೀಪಾದರಾಜರಂತೆ ಮೊದಲೇ ಆ ಹೆಸರು ಬಂದಿತ್ತೆಂಬ ಬಗ್ಗೆ ಆಧಾರಗಳಿರುವವು ಇದು ಹೇಗೇ ಇರಲಿ, ಇಲ್ಲಿಯ ವರೆಗೆ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಾಗಿದ್ದ ಲಕ್ಷ್ಮೀನಾರಾಯಣ ಮುನಿಗಳು ಇಷ್ಟರಲ್ಲಿಯೇ ಶ್ರೀಪಾದರಾಜ ಬಿರುದಾಂಕಿತ ಪ್ರೊಫೆಸರರಾಗಿ ಬಿಟ್ಟಿರುವರು. ಅಂದಮೇಲೆ ನಾವು ಇನ್ನು ಮುಂದೆ ಇವರನ್ನು ಇದೇ ಹೆಸರಿನಿಂದ ಸಂಬೋಧಿಸುವದು ಉಚಿತವಾಗಿರುವದು

ಈ ರೀತಿ ಚಿಕ್ಕಂದಿನಲ್ಲಿಯೇ-ಇನ್ನೂ ವಿದ್ಯಾರ್ಥಿಯಾಗಿರುವಾಗ-ಯೋಗಿ-ಮುನಿ-ಋಷಿ-ಶ್ರೀಪಾದರಾಜ ಪರಂತಾದ ಶ್ರೇಷ್ಠವಾದ ಗೌರವದ ಹೆಸರನ್ನು ಧರಿಸಿದವರು ಇವರೊಬ್ಬರೇ ಎಂದು ಹೇಳಬಹುದು. ಮುಂದೆ ಶ್ರೀ ವಾದಿರಾಜರು-ರಾಘವೇಂದ್ರರು-ಶ್ರೀನಿವಾಸತೀರ್ಥರು ಹೀಗೆಯೇ ಹೆಸರು ಧರಿಸಿದರಾದರೂ ಇವರೆಲ್ಲರಲ್ಲಿಯೂ ನಮ್ಮ ಶ್ರೀಪಾದರಾಜರೇ ಅಗ್ರಗಣ್ಯರೆಂದು ಹೇಳದಿರಲಾರೆವು. ಅಸ್ತು.

ಇಲ್ಲಿಗೆ ಶ್ರೀಪಾದರಾಜರ ವಿದ್ಯಾಭ್ಯಾಸವು ಸಂಪೂರ್ಣವಾದಂತಾಯಿತು. ಗುರುಗಳಾದ ಶ್ರೀವಿಬುಧೇಂದ್ರತೀರ್ಥರಿಗೆ ಗುರುದಕ್ಷಿಣೆಯನ್ನು ಕೊಟ್ಟು, ಅವರಿಂದ ಪೂರ್ಣ ಆಶೀರ್ವಾದವನ್ನು ಹೊಂದಿ, ಸ್ವರ್ಣವರ್ಣತೀರ್ಥರ ಹತ್ತಿರಕ್ಕೆ ಬಂದರು. ಊರಿಗೆ ಅರಸನಾದರೂ ತಂದೆಗೆ ಮಗನೆಂಬ ಮಾತು ಸುಳ್ಳಲ್ಲ. ಶ್ರೀಪಾದರಾಜರು ಸಾಷ್ಟಾಂಗ ಹಾಕಿದರು. ಇಂಥಾ ಪ್ರಚಂಡ ಪಂಡಿತ ಪ್ರಕಾಂಡನೂ, ಅತ್ಯಂತ ವಿರಕ್ತನೂ ಆದ ಮಗನನ್ನು ನೋಡಿ ಸ್ವರ್ಣವರ್ಣತೀರ್ಥರ ಆನಂದಕ್ಕೆ ಪಾರವಿಲ್ಲದಂತಾಯಿತು. ತಾವು ನೆಟ್ಟ ಒಂದು ಸಣ್ಣ ಬೀಜವೇ ಇಂತಹ ವಿಶಾಲ ವೃಕ್ಷವಾದುದಕ್ಕೆ ಅವರ ಕಣ್ಣಲ್ಲಿ ಆನಂದಾಶ್ರುಗಳು ತಮ್ಮಷ್ಟಕ್ಕೆ ತಾವೇ ಸುರಿದು ಹೋದವು! ತಲೆಯ ಮೇಲೆ ಕೈಯಿಟ್ಟು ತಾವೂ ಅನುಗ್ರಹಿಸಿದರು.

ಮುಂದೆ ತುಸ ದಿನಗಳು ಕಳೆದವು. ಸ್ವರ್ಣವರ್ಣತೀರ್ಥರಿಗೆ— ಪರಮಾತ್ಮನೇ ಸ್ವಪ್ನದಲ್ಲಿ ಬಂದು ನಿಮ್ಮ ತರುವಾಯ ಶ್ರೀಪಾದರಾಜರಿಗೇ ಸಂಸ್ಥಾನಕೊಡಬೇಕೆಂದು ಹೇಳಿದಂತೆ ಸೂಚನೆಯಾಯಿತು ಅವರಿಗೆ ಮತ್ತೂ ಆನಂದವು ಹೆಚ್ಚಿತು. ಮರುದಿನವೇ ಸ್ವಪ್ನವೃತ್ತಾಂತವನ್ನು ಶ್ರೀ

ಪಾದರಾಜರಿಗೆ ತಿಳಿಸಿ ಅವರ ಪೂರ್ವಾಶ್ರಮದ ತಾಯಿ-ತಂದೆಗಳನ್ನು ಕರೆ ಕಳುಹಿಸಿ ಎಲ್ಲರ ಸಮಕ್ಷಮದಲ್ಲಿ ಶ್ರೀಪಾದರಾಜರಿಗೆ ಸಂಸ್ಥಾನವನ್ನೊಪ್ಪಿಸಿದರು. ದೇವದುಂದುಭಿಗಳು ಮೊಳಗಿದವು; ದೇವತೆಗಳು ಪುಷ್ಪವೃಷ್ಟಿಯನ್ನು ಮಾಡಿದರು.

ಶೇಷಗಿರಿಯಪ್ಪನೂ-ಗಿರಿಯಮ್ಮನೂ ಈ ಆನಂದೋತ್ಸವವನ್ನು ನೋಡಿ ಹೌಹಾರಿ ಕೂತರು. ಅವರಿಗೆ ಯುಗವೇ ಬದಲಾಯಿತೆಂಬಂತೆ ತೋರಹತ್ತಿತು. ಚಿಕ್ಕಂದಿನಲ್ಲಿ ದನಕಾಯಲಿಕ್ಕೆ ಹತ್ತಿದ ತಮ್ಮ ಮಗನೇ ಈಗ ಪಂಡಿತಾಗ್ರೇಸರನೂ-ವಿರಕ್ತಶಿಖಾಮಣಿಯೂ ಆಗಿ ಕೇವಲ ವಸಿಷ್ಠಾದಿ ಋಷಿಗಳಂತೆ ತೇಜಸ್ಸನ್ನು ಗೂಡಿ, ಧರ್ಮಸಾಮ್ರಾಜ್ಯದಲ್ಲಿ ಸಿಂಹಾಸನಾರೂಢನಾದದ್ದನ್ನು ಕಣ್ತುಂಬಾ ನೋಡಿದ ಮೇಲೆ ಸಂತೋಷ ಪರವಶರಾದದ್ದೇನಾಶ್ಚರ್ಯ! ಸ್ವರ್ಣವರ್ಣತೀರ್ಥರನ್ನು ಮನದಣಿಯುವಂತೆ ಸ್ತುತಿಸಿದ್ದೇನು ಸೋಜಿಗ! ವಾಚಕರೇ, ಹಾಗಾದರೆ ಇದೇ ಸಮಯದಲ್ಲಿ ನಾವೂ ಇಷ್ಟು ಅಲ್ಲಿಗೆ ಹೋಗಿ ಶ್ರೀಗಳವರ ಜಯಜಯಕಾರ ಮಾಡೋಣ! ನಡೆಯಿರಿ ತ್ರಿವಾರ ಜಯಘೋಷ ಮಾಡಿರಿ.

ಶ್ರೀಸತ್ಯವ್ರತತೀರ್ಥ ಗುರುಕರಕಮಲ ಸಂಜಾತಾ!
ಶ್ರೀಮತ್ ಸ್ವರ್ಣವರ್ಣತೀರ್ಥಗುರು ಸಾರ್ವಭೌಮಾ! ಯತಿಕುಲಲಾಮಾ! ಶ್ರೀಪಾದರಾಜಗುರುವರಾ! ನಿನಗೆ ಅನಂತಾನಂತವಾಗಿ ನಮಿಸುವೆವು. ಪಾಮರರಾದ ನಮ್ಮನ್ನು ಉದ್ಧರಿಸು-ಉದ್ಧರಿಸು.

ಇನ್ನು ಈಗಿನ ೨೦ನೇ ಶತಮಾನದ ಪದ್ಧತಿಯಂತೆ—ಸ್ವರ್ಣವರ್ಣತೀರ್ಥಮಹಾರಾಜಕೀ ಜಯ್. ಶ್ರೀಪಾದರಾಜತೀರ್ಥ ಮಹಾರಾಜಕೀ ಜಯ್! ಎಂದೊಮ್ಮೆ ಉದ್ಘೋಷಿಸೋಣ. ಅಲ್ಲದೆ—

ರಾಗ | ಪೂರ್ವಿ | ಆದಿತಾಳ.

ಮಹಿಮೆಸಾಲದೇ | ಇಷ್ಟೇ ಮಹಿಮೆ ಸಾಲದೇ || ಪಲ್ಲ ||
ಅಹಿಶಯನನ ಒಲಿಮೆಯಿಂದ | ಮಹಿಯೊಳೆಮ್ಮ ಶ್ರೀಪಾದರಾಯರ|ಅ.ಪ|
ಮುತ್ತಿನಕವಚಮೇಲ್ಗುಲಾಯರತ್ನ | ಕೆತ್ತಿದ ಕರ್ಣಕುಂಡಲ ||
ಕಸ್ತೂರಿತಿಲಕ-ಶ್ರೀಗಂಧಲೇಪನ | ವಿಸ್ತಾರದಿಂದಮೆರೆದುಬರುವ || ೧ ||
ವಿಪ್ರಗೆಗೋಹತ್ಯದೋಷಬರಲು | ಕ್ಷಿಪ್ರಶಂಖೋದಕದಿಕಳೆಯೆ ||
ಅಪ್ರಬುದ್ಧರುದೂಷಿಸೆಕೇರೆಣ್ಣೆ | ಕಪ್ಪುವಸನಶುದ್ಧಮಾಡಿದ || ೨ ||

ಹರಿಗೆಸಮರ್ಪಿಸಿದನಾನಾ । ಪರಿಯಶಾಖಗಳನ್ನು ಭುಂಜಿಸೆ ॥
ನೆರರುನಗೆಲು ಶ್ರೀಶಕೃಷ್ಣನ । ಕರಃಣದಿಂದ ಹುಸಿಯು ಮಾಡಿದ ॥ ೩ ॥

ಎಂಬೀ ರೀತಿಯಾಗಿ ಅವರ ನಾಮ ಸಂಕೀರ್ತನೆ ಮಾಡೋಣ! ಸ್ವರ್ಣವರ್ಣತೀರ್ಥರು ಸಂಸ್ಥಾನವನ್ನೆಲ್ಲ ಶ್ರೀಪಾದರಾಜರಿಗೆ ಒಪ್ಪಿಸಿ ನಾಲ್ಕು ಉಪದೇಶದ ಮಾತುಗಳನ್ನು ಹೇಳಿ ಕೆಲವು ದಿವಸ ಶ್ರೀರಂಗದಲ್ಲಿಯೇ ತಪಸ್ಸು ಮಾಡುತ್ತ ಕಡೆಗೆ ಅಲ್ಲಿಯೇ ವೃಂದಾವನಸ್ಥರಾದರು. ಈ ವೃಂದಾವನದ ವಿಷಯವನ್ನು ಹಿಂದೆಯೇ ತಿಳಿಸಿರುವೆವು.

ಇನ್ನು ಮುಂದೆ ಮಹಾ ಮಹಿಮರಾದ ಶ್ರೀಪಾದರಾಜರು ಎಲ್ಲೆಲ್ಲಿ ಸಂಚಾರ ಮಾಡಿದರು? ಅಲ್ಲಿ ತೋರಿದ ಅವರ ಮಹಾತ್ಮ್ಯಗಳೇನು? ಎಂಬುದನ್ನು ದ್ವಿತೀಯ ಪಟಲದಲ್ಲಿ ಯಥಾಮತಿ ವಿವರಿಸುವ ಯತ್ನ ಮಾಡುವೆವು.

## ಪ್ರಥಮ ಪಟಲ ಸಮಾಪ್ತ.

# ದ್ವಿತೀಯ ಪಟಲ.

ಯಸ್ಯಬೃಂದಾವನಸೇವಯಾ ಸುವಿಮಲಾಂ ವಿದ್ಯಾಂ ಪಶೂನ್ಸಂತತಿಂ |
ಜ್ಞಾನಾಜ್ಞಾನ ಮನಲ್ಪಕೀರ್ತಿನಿವಹಂ ಪ್ರಾಪ್ನೋತಿ ಸೌಖ್ಯಂ ಜನಃ ||
ತಂ ವಂದೇ ನರಸಿಂಹ ತೀರ್ಥನಿಲಯಂ ಶ್ರೀವ್ಯಾಸರಾಟ್ ಪೂಜಿತಂ |
ಧ್ಯಾಯಂತಂ ಮನಸಾ ನೃಸಿಂಹಚರಣಂ ಶ್ರೀಪಾದರಾಜಂ ಗುರುಂ ||

(ಶ್ರೀವ್ಯಾಸರಾಯಕೃತ-ಪಂಚರತ್ನ ಮಾಲಿಕಾ.)

ಭಗವಂತನು ತನ್ನ ಭಕ್ತರ ಮಹಿಮೆಯು ಲೋಕದಲ್ಲಿ ಹಬ್ಬಬೇಕೆಂದೇ ಚಿತ್ರ ವಿಚಿತ್ರವಾದ ಪ್ರಸಂಗಗಳನ್ನು ಆಗಾಗ್ಗೆ ತರುತ್ತಿರುತ್ತಾನೆ. ಭಕ್ತರಾದವರು ಎಂಥ ಬಿಕ್ಕಟ್ಟಿನ ಪ್ರಸಂಗ ಬಂದರೂ ಮನಸ್ಸನ್ನು ಚಂಚಲವಾಗಗೊಡದೆ ದೇವರಲ್ಲೇ ಭಕ್ತಿಯನ್ನಿಟ್ಟು ಆತನ ಅನುಗ್ರಹದಿಂದ ಪಾರಾಗುವರು. ಹೀಗೆ ಅವರಲ್ಲಿ ತೋರುವ ದೈವಾನುಗ್ರಹವೇ ಪಾಮರರಾದ ನಮ್ಮನ್ನು ದಂಗು ಪಡಿಸುತ್ತಿರುವದು. ಇದಕ್ಕೇ ನಾವು ಸತ್ಪುರುಷರ ಲೀಲೆಗಳೆಂದು ಕರೆಯುವೆವು ಪ್ರತಿಯೊಬ್ಬ ಸತ್ಪುರುಷರ ಚರಿತ್ರದಲ್ಲೂ ಇಂಥ ಅನೇಕ ಲೀಲೆಗಳನ್ನು ಕಾಣಬಹುದು. ಪ್ರಸ್ತುತಕ್ಕೆ ಉಕ್ತರಾದ ಶ್ರೀಪಾದರಾಜರಂತೂ ಅಗಾಧ ಮಹಿಮಾಶಾಲಿಗಳು; ಮಹಾ ಯೋಗಿಗಳು; ಹಿಳ್ಳೇ ತಪಸ್ವಿಗಳು. ಇಂತಹ ಮಹಾನುಭಾವರ ಲೀಲಾ ವಿನೋದಗಳನ್ನು ಸಾಕಲ್ಯೇನ ಬಣ್ಣಿಸುವುದಕ್ಕೆ ಕ್ಷುದ್ರಾದಪಿ ಕ್ಷುದ್ರನಾದ ನಾನು ಎಷ್ಟೆಷ್ಟೂ ಶಕ್ತನಲ್ಲವಾದರೂ ಪುಣ್ಯಪುರುಷರ ನಾಮೋಚ್ಚಾರಣ ಮಾತ್ರದಿಂದಲೇ ಅನೇಕ ಜನ್ಮ ಜನ್ಮಾಂತರದ ಪಾಪಗಳು ಖಂಡಿಸಲ್ಪಟ್ಟು, ಕಿಂಚಿತ್ತಾದರೂ ಪುಣ್ಯಕ್ಕೆ ಭಾಗಿಯಾಗಬಹುದೆಂದು ನಂಬಿ, ಈ ಅಸಾಧ್ಯವಾದ ಕಾರ್ಯಕ್ಕೆ ಕೈ ಹಾಕಿರುವೆನು. ಶ್ರೀಪರಮಾತ್ಮನು ಬಡಪಾಯಿಯಾದ ವಿದುರನ ಮನೆಯಲ್ಲಿ ಎಲ್ಲಿಯೋ ಒಂದು ಕುಡಿತೆ ಹಾಲನ್ನು ಕುಡಿದು ಕಡಲಿನಂಥ ಕಾಲುವೆಯನ್ನು ಹರಿಸಿದ ಹಾಗೆ, ಆಸ್ತಿಕ ಮಹಾಶಯರಾದ ರಸಿಕ ವಾಚಕರು ನನ್ನೀ ಶುಷ್ಕವಾದ ಲೇಖನಿಯಿಂದ ಹೊರಟ ಒಂದೆರಡು ಬಿಂದುಗಳನ್ನೇ ಕ್ಷೀರಸಾಗರದಂತೆ ಭಾವಿಸಿ, ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕೆಂದು ವಿನಯದಿಂದ ವಿಜ್ಞಾಪಿಸಿಕೊಳ್ಳುವೆನು.

## ೧ ಶ್ರೀ ವ್ಯಾಸರಾಯರ ಶಿಷ್ಯತ್ವ.

ಶ್ರೀಪಾದರಾಯರು ಸ್ವರ್ಣವರ್ಣತೀರ್ಥರ ಅನುಗ್ರಹದಿಂದ ಯಾವಾಗ ಮುಳಬಾಗಿಲಕ್ಕೆ ಸಂಸ್ಥಾನಾಧಿಪತಿಗಳಾಗಿ ಕುಳಿತರೋ, ಅಂದಿನಿಂದ ಅಲ್ಲಿಯೇ ಇರಹತ್ತಿದರು.

ಮುಳಬಾಗಿಲವು ಮೈಸೂರ ಸಂಸ್ಥಾನದ ಕೋಲಾರ ಡಿಸ್ಟ್ರಿಕ್ಟಿನಲ್ಲಿದೆ. ಅಲ್ಲಿಗೆ ಹೋಗಬೇಕಾದರೆ ಬೌರಿಂಗಪೇಟೆ ಅಥವಾ ಕೋಲಾರಗಣಿ ಸ್ಟೇಶನ್ನಿಗೆ ಇಳಿದು ಅಲ್ಲಿಂದ ಮೋಟಾರಿನ ಮೇಲೆ ಹೋಗಬಹುದು (೨೪ ಮೈಲು ಆಗುವದು) ಊರಲ್ಲಿ ಮೂರು ನಾಲ್ಕು ಸಾವಿರ ಮನೆಗಳಿವೆ. ಬ್ರಾಹ್ಮಣರ ಮನೆಗಳೂ ನಾಲ್ವತ್ತು-ಐವತ್ತರ ವರೆಗುಂಟು. ಊರಿಂದ ಒಂದು ಮೈಲಿನ ಮೇಲೆ ಮಹಾತ್ಮರಾದ ದೂರ್ವಾಸಋಷಿಗಳು ಸ್ಥಾಪಿಸಿದಂಥ ಶ್ರೀ ನೃಸಿಂಹ ದೇವರ ದೇವಸ್ಥಾನವೂ, ನೃಸಿಂಹ ತೀರ್ಥವೆಂಬ ಹೆಸರಿನ ಒಂದು ಚಿಕ್ಕ ಸರೋವರವೂ ಉಂಟು. ಅಲ್ಲಿಯೇ ಒಂದು ಸಣ್ಣ ಗುಹೆಯಿದ್ದು ಅದರೊಳಗೆ ವ್ಯಾಸರಾಯರ ಒಂದು ಪ್ರತೀಕವೂ ಇದೆ. ಈ ಗುಹೆಯೇ ವ್ಯಾಸರಾಯರು ವಿದ್ಯಾಭ್ಯಾಸ ಮಾಡಿದ ಸ್ಥಳವೆಂದು ಹೇಳುವರು. ಅಲ್ಲಿ ಒಂದು ಪ್ರಾಣದೇವರೂ ಇರುವದು. ಇದಕ್ಕೆ ಸಮೀಪವಾಗಿ-ಶ್ರೀ ಅಕ್ಷೋಭ್ಯತೀರ್ಥರು ಶ್ರೀ ವಿದ್ಯಾರಣ್ಯರನ್ನು ವಾದದಲ್ಲಿ ಜೈಸಿ ನಿಲ್ಲಿಸಿದ-ಜಯಸ್ತಂಭವು ಗುಡ್ಡದ ಮೇಲೆ ಇರುವದು. ಈದು ಇಗೆ ಸದ್ಯಕ್ಕೆ ಯಾರೋ ಕುಹಕ ಜನರಿಂದ ತುಂಡುತುಂಡಾಗಿ ಒಡೆಯಲ್ಪಟ್ಟು ಅಕ್ಷರಗಳು ಕಾಣದಂತೆ ನಾಶವಾಗಿ ಬಿದ್ದಿರುವದು ಇರಲಿ.

ಶ್ರೀಪಾದರಾಯರ ತಾಯಿಯ ಅಕ್ಕನನ್ನು ಕಾವೇರೀತೀರವಾಸಿಯಾದ ರಾಮಾಚಾರ್ಯರೆಂಬವರಿಗೆ ಕೊಟ್ಟಿತ್ತೆಂತಲೂ, ಅವರ ಹೊಟ್ಟೆಯಲ್ಲಿ ಹುಟ್ಟಿದ ಮಗನೇ ಶ್ರೀ ಬ್ರಹ್ಮಣ್ಯತೀರ್ಥರೆಂಬ ಹೆಸರಿನಿಂದ ಪ್ರಸಿದ್ಧನಾದನೆಂತಲೂ ಹಿಂದೆಯೇ ತಿಳಿಸುರುವೆನಷ್ಟೇ? ಈ ಬ್ರಹ್ಮಣ್ಯತೀರ್ಥರು ಅಬ್ಬೂರಲ್ಲಿರುವಾಗ ಅಲ್ಲಿಗೆ ಸಂಚಾರಾರ್ಥವಾಗಿ ಬಂದ ಸ್ಮಾರ್ತ † (ಅರುವತ್ತೊಕ್ಕಲು) ದಂಪತಿಗಳಾದ ರಾಮಾಚಾರ್ಯ-ಸೀತಾಂಬಾ ಎಂಬವರಿಗೆ ಅನುಗ್ರಹ ಮಾಡಿ ಅವರ ಹೊಟ್ಟೆಯಲ್ಲಿ ಹುಟ್ಟಿದ ಗಂಡುಮಗುವನ್ನು (ಕ್ರಿ. ಶ.

---

ಅರುವತ್ತೊಕ್ಕಲೆಂಬುದು—ವೈಷ್ಣವರಲ್ಲಿಯೇ ಒಂದು ಭೇದವಾಗಿದೆ.

೧೪೪೬) ಭೂಸ್ಪರ್ಶ ಕೂಡಾ ಆಗಗೊಡದಂತೆ ಬಂಗಾರದ ಹರಿವಾಣ ದಲ್ಲಿಟ್ಟು ತರಿಸಿಕೊಂಡು ಕಣ್ವನದಿಯ ಬಿಳೀಕಲ್ಲು ಮಡುವು ಎಂಬಲ್ಲಿ ಸ್ವಯಂ ತಾವೇ ತೊಳೆದು, ಪುರುಷೋತ್ತಮ ಗುಹೆಯಲ್ಲಿಟ್ಟು ರಕ್ಷಣೆ ಮಾಡಿದರು. ಮುಂದೆ ಈ ಮಗುವಿಗೆ ಐದನೇ ವರ್ಷದಲ್ಲಿ ಅಂದರೆ ೧೪೫೧ ರಲ್ಲಿ ಉಪನಯನವನ್ನು ಮಾಡಿ ಏಳನೆಯ ವರ್ಷದಲ್ಲಿಯೇ (೧೪೫೩ ರಲ್ಲಿ) ಸಂನ್ಯಾಸಾಶ್ರಮವನ್ನು ಕೊಟ್ಟು ತಮಗೆ ಆಪ್ತರೂ-ವಿದ್ಯಾಪಾರಂಗತರೂ ಆದ ಶ್ರೀಪಾದರಾಯರ ಬಳಿಯಲ್ಲಿ ವಿದ್ಯಾಭ್ಯಾಸಕ್ಕಿಟ್ಟರು. + ವಾಮನ ನಂತಿದ್ದ ಈ ಸಣ್ಣ ವಟುವೇ ಮುಂದೆ ತ್ರಿವಿಕ್ರಮಾವತಾರವನ್ನು ತಾಳಿದ ಭಗವಂತನಂತೆ ದೇಶದಲ್ಲೆಲ್ಲ ಪ್ರಖ್ಯಾತನಾಗಿ ಬೆಳೆದು ವಿಜಯನಗರ ರಾಜರ ಕುಲಗುರುವೆನಿಸಿಕೊಂಡು ಕನ್ನಡದೇಶ-ಕನ್ನಡಭಾಷೆಯನ್ನು ಬಹು ಮುಂದಕ್ಕೆ ತಂದರು. ಇವರೇ ಶ್ರೀ ವ್ಯಾಸರಾಯರು; ಕರ್ಣಾಟಕ ಸಿಂಹಾ ಸನಾಧೀಶ್ವರರು.

ಇವರು ಶ್ರೀಪಾದರಾಯರಲ್ಲಿ ವಿದ್ಯಾಭ್ಯಾಸಕ್ಕಿದ್ದಾಗ ಹಗಲೆಲ್ಲ ತಮ್ಮ ಕಾವೀಶಾಟಿಯನ್ನು ಗುರುಗಳ ಮುಂದೆ ಸುತ್ತಿಟ್ಟು ಹುಡುಗರೊಡನೆ ಯಾವುದೊಂದು ಆಟಪಾಟಗಳಲ್ಲಿಯೇ ಹೊತ್ತುಗಳೆಯುತ್ತಿದ್ದರು. ಪಾಠ ವನ್ನೇ ಸರಿಯಾಗಿ ಓದುತ್ತಿರಲಿಲ್ಲ. ಆದರೇನು? ಶ್ರೀಪಾದರಾಯರು ಕೇಳಿ ದಾಗ ಮಾತ್ರ ಎಲ್ಲರಿಗಿಂತಲೂ ಹೆಚ್ಚಾಗಿಯೇ ಒಪ್ಪಿಸುತ್ತಿದ್ದರು ಯಾವ ಪಾಠವನ್ನೇ ಆಗಲಿ, ಇವರಿಗೆ ಒಮ್ಮೆ ಹೇಳಿದರೆ ಸಾಕು; ಅದರ ಊಹಾ ಪೋಹವನ್ನೆಲ್ಲ ತಾವೇ ಮಾಡಿಕೊಂಡು ಬಿಡುತ್ತಿದ್ದರು. ಇಂತಹ ಸೂಕ್ಷ್ಮ ಬುದ್ಧಿಯೂ-ಮೇಧಾಶಕ್ತಿಯೂ ಇತರ ಬಾಲಕರಿಗೆಲ್ಲ ಹೇಗೆ ಬರಬೇಕು? ಆದರಿಂದ ಅವರು ವ್ಯಾಸರಾಯರ ಮೇಲೆ ಅಸೂಯೆಪಡಹತ್ತಿದರು; ಹೊತ್ತು ನೋಡಿಕೊಂಡು ಗುರುಗಳ ಮುಂದೆ ಚಾಡಿಯನ್ನೂ ಹೇಳಿದರು. ಶ್ರೀಪಾದರಾಯರು ಕಡಿಮೆಯವರಲ್ಲ. ಅವರು ವ್ಯಾಸರಾಯರ ಮೇಧಾ

---

\+ ಈ ಮಾತನ್ನು ಶ್ರೀ ಪುರಂದರದಾಸರು ತಮ್ಮ 'ವ್ಯಾಸರಾಯಸುಳಾದಿ' ಯಲ್ಲಿ ಹೀಗೆ ಒಣ್ಣಿಸಿರುತ್ತಾರೆ:—

"ಶ್ರೀ ನಾರಾಯಣಯೋಗಿಯಾದ ಶ್ರೀಪಾದರಾಯರಲಿ ವಿಹಿತವಾದ ವಿದ್ಯಾಭ್ಯಾಸ ಮಾಡಿದೆ ನೀನು ಧರೆಯೊಳು ವಿಜಯೀಂದ್ರ-ವಾದಿರಾಜರೆಂಬೀ ಪರಮ ಶಿಷ್ಯರ ಪಡೆದು ಮೆರೆದೆ"

ಶಕ್ತಿಯನ್ನೂ-ಸಾಮರ್ಥ್ಯವನ್ನೂ ಪೂರಾ ಬಲ್ಲವರಾಗಿದ್ದರು. ಶಿಷ್ಯರ ಮಾತನ್ನು ಕೇಳಿ ಅವರಿಗೆ ನಗೆ ಬಂತು. ಆಗ ಹೇಳಿದರು:—“ಅಪ್ಪಾ, ಶಿಷ್ಯರುಗಳಿರಾ! ಈ ಬಾಲಕನು ಯಾರೆಂದು ತಿಳಿದಿರುವಿರಿ? ಒಂದಕ್ಕೆ ಯಾವ ಮಹಾ ದೈತ್ಯನಿಂದ ಲೋಕವೆಲ್ಲ ತ್ರಸ್ತಗೊಂಡು ದೇವತೆಗಳು ಕೂಡಾ ಪರಮಾತ್ಮನ ಮರೆಹೊಕ್ಕು ಬದುಕಿಕೊಂಡರೋ, ಅಂಥಾ ಹಿರಣ್ಯ ಕಶಿಪುವನ್ನು(ಇಪ್ಪತ್ತನೆಯ ಶತಮಾನದ ಭಾರತೀಯರಂತೆ) ಕೇವಲ ಸತ್ಯಾಗ್ರಹದ ಬಲದಿಂದಲೇ ಜಯಿಸಿ, ಅವನನ್ನು ಸದೆದಿಕ್ಕಿದ ಪ್ರಲ್ಹಾದನೇ ಈ ರೂಪದಿಂದ ಅವತರಿಸಿರುವನು. ಇಂಥವನಲ್ಲಿ ನೀವು ಅಸೂಯವನ್ನೂ-ವೃಥಾಭಿಮಾನವನ್ನೂ ತಾಳಕೂಡದು. ಆತನ ಯೋಗ್ಯತೆ ಎಂಥಾದ್ದೆಂಬದನ್ನು ನಾವು ಬಲ್ಲೆವು. ನಿಮಗಿನ್ನೂ ಅದರ ಅರಿವು ಇಲ್ಲ. ಬೇಕಾದರೆ ಒಮ್ಮೆ ಅದರ ನಿದರ್ಶನವನ್ನು ಮಾಡಿಕೊಡುವೆವು, ಎಂದು ಹೇಳಲು ಶಿಷ್ಯರು ಹೌಹಾರಿ ಕುಳಿತರು.

ಮುಂದೆ ಒಂದಾನೊಂದು ದಿವಸ ಶ್ರೀಬ್ರಹ್ಮಣ್ಯತೀರ್ಥರು ಮಗನ (ವ್ಯಾಸರಾಯರ) ವಿದ್ಯಾಭ್ಯಾಸವನ್ನು ನೋಡಲಿಕ್ಕೆಂದು ಬಂದರು. ವ್ಯಾಸರಾಯರು ಯಥಾಪ್ರಕಾರ ಆಟದಲ್ಲಿಯೇ ಆಸಕ್ತರಾಗಿದ್ದರು. ಆಗ ಬ್ರಹ್ಮಣ್ಯತೀರ್ಥರು:—ನಮ್ಮ ಹುಡುಗನು ಪಾಠವನ್ನು ಚನ್ನಾಗಿ ಕಲಿಯುವಂತೆ ತೋರುವದಿಲ್ಲವೆಂದು ಶ್ರೀಪಾದರಾಯರನ್ನು ಕೇಳಲು, ಅದಕ್ಕೆ ಅವರು:—ನಿಮ್ಮ ಹುಡುಗನ ಮೇಧಾಶಕ್ತಿಯು ಅಪೂರ್ವವಾದದ್ದು. ಆತನು ಹಗಲೆಲ್ಲ ಆಟದಲ್ಲಿ ಆಸಕ್ತನಾಗಿದ್ದರೂ ಪಾಠವನ್ನು ಹೇಗೆ ಒಪ್ಪಿಸುತ್ತಾನೆ ನೋಡಿರೆಂದು ವ್ಯಾಸರಾಯರನ್ನು ಕರೆದು ಸುಧಾಪಾಠವನ್ನು ಅನುವಾದಮಾಡ ಹೇಳಲು, ಚಾ-ಚೂ ತಪ್ಪದಂತೆ ಇಡೀ ಸುಧಾ ಗ್ರಂಥವನ್ನೇ ಮುಖ ಪಾಠ ಹೇಳಿಬಿಟ್ಟರು. ವೇದಾಂತಾದಿ ಶಾಸ್ತ್ರಗಳಲ್ಲಿಯೂ ಅದ್ವಿತೀಯ ಪಾಂಡಿತ್ಯವನ್ನು ತೋರಿಸಿದರು. ಇಷ್ಟು ಚಿಕ್ಕವಯಸ್ಸಿನಲ್ಲಿಯೇ ಅವರಿಗಾದ ಅಪೂರ್ವ ಗುರ್ವನುಗ್ರಹವನ್ನು ಕಂಡು ಬ್ರಹ್ಮಣ್ಯತೀರ್ಥರು ಬೆರಗಾಗಿ ಕುಳಿತರು. ಅವರ ಆನಂದಕ್ಕೆ ಪಾರವಿಲ್ಲದಾಯಿತು! ಅಷ್ಟರಲ್ಲಿ ಒಬ್ಬಾನೊಬ್ಬ ಮಹಾರಾಜನಿಂದ ಶಾಸ್ತ್ರವಾದಕ್ಕೋಸ್ಕರ ಶ್ರೀಪಾದರಾಯರಿಗೆ ಆಮಂತ್ರಣ ಬಂತು. ಅವರು ಇದೇ ಸಮಯವೆಂದು ಶಿಷ್ಯರಾದ ವ್ಯಾಸರಾಯರನ್ನು ಕರೆದು:—

“ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ವತೋ |
ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚ ಭಾವಂ ಗತಾಃ ||
ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ |
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾ ಮ್ನಾಯೈಕವೇದ್ಯೋಹರಿಃ” ||

ಎಂತ ಉಪದೇಶಮಾಡಿ ತಾವು ಹೊರಡದೆ ಅವರನ್ನೇ ಕಳಿಸಿಬಿಟ್ಟರು. ಬ್ರಹ್ಮಣ್ಯತೀರ್ಥರಾದರೂ-ಹುಡುಗನು ಪ್ರಚಂಡ ಪಂಡಿತರನ್ನು ವಾದದಲ್ಲಿ ಹೇಗೆ ಜಯಿಸುವನೋ ನೋಡಬೇಕೆಂದು ತಾವೂ ಅವರ ಸಂಗಡ ಹೊರಟರು. ಮಹಾರಾಜನಿಂದ ಅಪೂರ್ವವಾದ ಮಾನಮರ್ಯಾದೆಯಾಯಿತು. ವಾದಿಪ್ರತಿವಾದಿಗಳು ಅಲಂಕೃತವಾದ ರಾಜಸಭೆಯಲ್ಲಿ ವೀರಾಸನದಿಂದ ಕುಳಿತರು. ಶಾಸ್ತ್ರವಾದಕ್ಕಾರಂಭವಾಯಿತು. ವಾದಿಜಯದಲ್ಲಿ ಸಿಂಹಸ್ವರೂಪರಾದ ವ್ಯಾಸರಾಯರ ಕೋಟಿಗೆ ಪ್ರತಿಕೋಟಿಯನ್ನು ಏರಿಸುವದು ಯಾರಿಂದಲೂ ಆಗಲಿಲ್ಲ. ಅವರ ಶಾಸ್ತ್ರಾನುವಾದಕ್ಕೆ ಸಮಸ್ತ ಪಂಡಿತರೂ ಬೆರಗಾಗಿ ಹೋದರು. ಜಯಪತ್ರಿಕೆಯು ಸಿಕ್ಕು ಹೋಯಿತು. ಈ ವಾದಿಜಯದಿಂದ ಬ್ರಹ್ಮಣ್ಯತೀರ್ಥರಿಗಾದ ಆನಂದವನ್ನು ಹೇಳಲಾಗಲ್ಲ. ಮಹಾರಾಜನು ವ್ಯಾಸರಾಯರಿಗೂ-ಬ್ರಹ್ಮಣ್ಯತೀರ್ಥರಿಗೂ ಬೇಕಾದಷ್ಟು ಸಂಭಾವನೆಕೊಟ್ಟು ಕಳಿಸಿದನು. ಹಾಗೆಯೇ ಇವರು ಕನ್ನಡಿಗರ ಸಾಮ್ರಾಜ್ಯದ ರಾಜಧಾನಿಯಾದ ವಿಜಯನಗರಕ್ಕೆ ಬಂದರು. ಆಗ ಅಲ್ಲಿ ಮಲ್ಲಿಕಾರ್ಜುನನೆಂಬ ಅರಸನು (೧೪೫೧-೧೪೬೫) ರಾಜ್ಯಭಾರ ಮಾಡುತ್ತಿದ್ದನು. ಆತನು ಇವರಿಬ್ಬರನ್ನು ಪಲ್ಲಕ್ಕಿಯಲ್ಲಿ ಕೂಡ್ರಿಸಿ ಮೆರವಣಿಗೆಯಿಂದ ಕರೆದುಕೊಂಡು ಹೋಗಿ ಅತ್ಯಂತ ಆದರಸತ್ಕಾರ ಮಾಡಿದನು. ಆಗ ಇಡೀ ಕರ್ಣಾಟಕ ದೇಶಕ್ಕೆ ಅನಾವೃಷ್ಟಿಯಾಗಿ ವೀರಕ್ಷಾಮವು ಬಂದೊದಗಿತ್ತು. ಅದರಿಂದ ರಾಜನೂ ಪ್ರಜೆಗಳೂ ಕೂಡಿ ವ್ಯಾಸರಾಯರನ್ನು ಪ್ರಾರ್ಥಿಸಿಕೊಂಡರು. ವ್ಯಾಸರಾಯರು ಅವರ ಪ್ರಾರ್ಥನೆಯನ್ನು ಅಂಗೀಕರಿಸಿ ಜಪಕ್ಕೆ ಕುಳಿತರು. ಅವರ ದಿವ್ಯವಾದ ತಪಃಪ್ರಭಾವದಿಂದ ಮುಂದೆ ತುಸ ದಿವಸದಲ್ಲಿಯೇ ದೇಶದಲ್ಲಿ ಬೇಕಾದಷ್ಟು ವೃಷ್ಟಿಯುಂಟಾಗಿ, ಕ್ಷಾಮವು ಹೇಳಹೆಸರಿಲ್ಲದೆ ಓಡಿಹೋಯಿತು. ರಾಜಪ್ರಜರಿಗಾದ ಸಂತೋಷವನ್ನು ಹೇಳತೀರದು. ಅವರು ವ್ಯಾಸರಾಯರನ್ನು ತಮ್ಮ ಕುಲದೈವತವೆಂದು ಭಾವಿಸಿ ಅಪರಿಮಿತವಾದ ಸಂಭಾವನೆ ಮಾಡಿದರು.

ಈ ರೀತಿ ಚಿಕ್ಕಂದಿನಲ್ಲಿಯೇ ವ್ಯಾಸರಾಯರು ಅನೇಕ ವಾದಿಗಳನ್ನು ಜೈಸಿ ಜಯಪತ್ರಿಕಯನ್ನೂ-ಸಂಭಾವನೆಯನ್ನೂ ಪಡೆದು ಪುನಃ ಗುರುಗಳಾದ ಶ್ರೀಪಾದರಾಯರ ಹತ್ತರ ವ್ಯಾಸಂಗಕ್ಕೆ ಬಂದು ನಿಂತರು. ಬ್ರಹ್ಮಣ್ಯತೀರ್ಥರು ಅತ್ತ ತಮ್ಮ ಪ್ರವಶ್ಯಪಲ್ಲಿ ಎಂಬ ಗುಹೆಗೆ ನಡೆದರು.

ಪ್ರಾಚೀನ ವಿದ್ಯಾಭ್ಯಾಸದ ಪದ್ಧತಿಗೂ-ಅರ್ವಾಚೀನ ಪದ್ಧತಿಗೂ ಕಡಲು-ಕಾಲುವೆಗಳಷ್ಟು ಅಂತರವಾಗಿರುವದು. ಈಗಿನ ಕಾಲದಲ್ಲಾದರೋ ಶಾಲೆ-ಕಾಲೇಜುಗಳಲ್ಲಿ ಹತ್ತುಹನ್ನೆರಡು ವರ್ಷ ಆಂಗ್ಲ ಭಾಷೆಯನ್ನೋದಿ ಬಿ. ಏ. ಎಮ್. ಏ. ಡಿಗ್ರಿಯನ್ನು ಪಡೆದವರೇ ಪಂಡಿತರೆಂತಲೂ, ಇತರ ಪ್ರಾಕೃತ-ವೈದಿಕ ವಿದ್ಯಾಭ್ಯಾಸಾದಿಗಳನ್ನು ಮಾಡಿದವರೆಲ್ಲರೂ ಅಪ್ರಯೋಜಕರೆಂತಲೂ ಭಾವಿಸಹತ್ತಿರುವರು. ಹೀಗಾಗಿ ಸುಧಾರಣಾ ಪಕ್ಷದವರು-ಸಾಂಪ್ರದಾಯಾಭಿಮಾನಿಗಳು ಎಂಬೆರಡು ಪಂಗಡಗಳುಂಟಾಗಿ, ಅವರವರಲ್ಲಿ ಐಕ್ಯವು ಶಿಥಿಲವಾಗುತ್ತ ನಡೆದಿರುವದು. ಒಟ್ಟಿನ ಮೇಲೆ ಎರಡೂ ಪಕ್ಷದವರ ವಿದ್ಯಾಭ್ಯಾಸವೂ ಪುಸ್ತಕವಿದ್ಯೆಯೇ ಆಗಿ ಪರಿಣಮಿಸಿರುವದೆಂದೂ ಆದರಿಂದಲೇ ಹೀಗಾಗಿರುವದೆಂದೂ ಹೇಳಬಹುದು. ಪ್ರಾಚೀನಕಾಲದಲ್ಲಿ ಹೀಗಿರಲಿಲ್ಲ. ಅವರ ವಿದ್ಯಾಭ್ಯಾಸವು ವ್ಯವಹಾರದಲ್ಲಿ ಉಪಯೋಗವಾಗುತ್ತಿತ್ತು. ತ್ರೇತಾಯುಗದಲ್ಲಿ ಶ್ರೀಹನುಮಂತದೇವರು ಗಾನಮಾಡಲಾಗಿ ಕಲ್ಲು ಕರಗಿ, ಅದರ ಮೇಲಿಟ್ಟ ನಾರದರ ತಂಬೂರಿಯು ಕಲ್ಲಿನಲ್ಲಿ ಸಿಕ್ಕಿಕೊಂಡಿತ್ತೆಂದು ಹೇಳುವ ಪುರಾಣದ ಮಾತಂತೂ ಇರಲಿ; ಅಕಬರ ಬಾದಶಹನ ಕಾಲದಲ್ಲಿ ಒಬ್ಬ ಸಂಗೀತಗಾರನು ದೀಪಕ ರಾಗಮಾಡಿ ದೀಪವನ್ನು ಹಚ್ಚಿಸಿದನೆಂದೂ, ಇನ್ನೊಬ್ಬನು ಇನ್ನೊಂದು ರಾಗದಿಂದ ಯಮುನಾನದಿಯ ನೀರನ್ನು ಕಾಯಿಸಿದನೆಂದೂ ಚರಿತ್ರಗಳು ಹೇಳುತ್ತಲಿವೆ. ಶ್ರೀಮದ್ರಾಘವೇಂದ್ರ ಸ್ವಾಮಿಗಳು ಅಗ್ನಿಸೂಕ್ತವನ್ನು ಪಠಿಸುತ್ತ ಗಂಧವನ್ನು ತೇದು ಬ್ರಾಹ್ಮಣರಿಗೆ ಕೊಡಲು, ಮೈಗೆಲ್ಲ ಕೊಳ್ಳಿಯನ್ನು ಹಚ್ಚಿದಂತಾಯಿತೆಂತಲೂ-ಪುನಃ ವರುಣಸೂಕ್ತದಿಂದ ತೇದುಕೊಟ್ಟ ಮೇಲೆ ತಂಪಾಯಿತೆಂತಲೂ ಅವರ ಚರಿತ್ರದಿಂದ ತಿಳಿದು ಬರುವದು. ವ್ಯಾಸರಾಯರು ಜಪಮಾಡಿ ಅನಾವೃಷ್ಟಿದೋಷವನ್ನೂ-ಕ್ಷಾಮವನ್ನೂ ಪರಿಹರಿಸಿದರೆಂಬ ಮೇಲಿನ ಮಾತಾದರೂ ಅದನ್ನೇ ಸೂಚಿಸುವದು. ಈ ರೀತಿಯಾಗಿ ಪ್ರಾಚೀನ ಪಂಡಿತರು ತಮ್ಮ ವಿದ್ಯಾ

ಭ್ಯಾಸವನ್ನು ವ್ಯವಹಾರದಲ್ಲಿ ತಂದುತೋರಿಸುತ್ತಿದ್ದರಿಂದೇ ಆಗ ಅವರಿಗೂ ಆ ವಿದ್ಯಾಭ್ಯಾಸಕ್ಕೂ ಅಷ್ಟು ಮರ್ಯಾದೆ ಇತ್ತು. ಈಗಿನ ಕಾಲದಲ್ಲಿ ಅವೆಲ್ಲ ಮಾಯವಾಗಿ ಕಲಿಯುಗ-ಕಲಿಕಾಲ ಎಂದು ಹೇಳುತ್ತ, ಸ್ವೇಚ್ಛಾಚಾರಪ್ರವರ್ತರಾಗಿ, ಮುಂದಿಯ ನಿಂದೆಗೆ ಮಾತ್ರ ಪಾತ್ರರಾಗಿರುವೆವು. ಮೇಲಿನ ಉದಾಹರಣೆಗಳೆಲ್ಲ ಕಲಿಕಾಲದವೇ ಅಲ್ಲವೆ? ಅಂದಮೇಲೆ ನಾವೀಗ ಪ್ರಾಚೀನ-ಅರ್ವಾಚೀನ ಪದ್ಧತಿಗಳೆರಡನ್ನೂ ಸಮ್ಮಿಶ್ರಮಾಡಿ ಅದನ್ನು ವ್ಯವಹಾರೋಪಯೋಗವಾಗುವಂತೆ ಮಾಡಿಕೊಂಡಲ್ಲಿ ಮಾತ್ರ ಜಗತ್ತಿನಲ್ಲಿ ನಮಗೆ ಪೂರ್ವದ ಮರ್ಯಾದೆಯುಂಟಾಗಬಹುದು. ಹಿಂದೂಜನರು ನಾವು ಮುಂದೂ ಜನರಾಗಬಹುದು. ಇರಲಿ.

ಹಿಂದಾನೊಂದು ದಿವಸ ವ್ಯಾಸರಾಯರು ಒಬ್ಬರೇ ಗುಹೆಯಲ್ಲಿ ಕುಳಿತುಕೊಂಡು ಗುರುಗಳು ಕಲಿಸಿದ ಪಾಠವನ್ನು ಚಿಂತನೆಮಾಡುತ್ತಲಿದ್ದರು. ಪಾಠವು ಮುಗಿಯುತ್ತಲೆ, ಅಲ್ಲಿಯೇ ಸ್ವಲ್ಪ ಅಡ್ಡಾದರು. ಅಡ್ಡಾದುದೊಂದೇ ತಡ. ಗಾಢವಾದ ನಿದ್ರೆಯು ಹತ್ತಿಬಿಟ್ಟಿತು. ಆ ಸಮಯದಲ್ಲಿ ಎಲ್ಲಿಂದಲೋ ಒಂದು ಹೆಬ್ಬಾವು ಗುಹೆಯಲ್ಲಿ ಬಂದಿತು. ಸುತ್ತಲೂ ದೃಷ್ಟಿಸಿತು. ಮನುಷ್ಯರಸುಳಿವೆಂಬುದೇ ಇಲ್ಲ. ಒತ್ತಟ್ಟಿಗೆ ಮೃಗಚರ್ಮಾಸನದ ಮೇಲೆ ವ್ಯಾಸರಾಯರು ನಿದ್ದೆಹತ್ತಿ ಮಲಗಿದ್ದರು. ಹಾವಿಗೆ ಅಡ್ಡಾಡಲಿಕ್ಕೆ ಅನುವಾಯಿತು. ಅದು ನೆಟ್ಟಗೆ ಹೋದದ್ದೇ ಮಲಗಿದ ವ್ಯಾಸರಾಯರನ್ನು ತನ್ನ ಅಗಲವಾದ ಬಾಯಿತೆರೆದು ಕಾಲಕಡೆಯಿಂದ ನುಂಗಹತ್ತಿತು. ವ್ಯಾಸರಾಯರು ಕಣ್ಣುಬಿಟ್ಟು ನೋಡಿದರು; ಘಟಸರ್ಪವೊಂದು ತಮ್ಮನ್ನು ನುಂಗಲಿಕ್ಕೆ ಹತ್ತಿದೆ ಈಗಾಗಲೇ ಕಾಲುಗಳೆರಡೂ ಅದರ ಹೊಟ್ಟೆಯಲ್ಲಿ ಹೋಗಿಬಿಟ್ಟವೆ. ಮೇಲಕ್ಕೇಳಲು ಸಹ ಬರುವಂತಿಲ್ಲ. ಇಂತಹ ಸ್ಥಿತಿಯಲ್ಲಿ ಮಾಡಬೇಕೇನು? ಅವರು ಮನಸ್ಸಿನಲ್ಲಿಯೇ ಭಗವಂತನನ್ನೂ ಗುರುಗಳನ್ನೂ ಸ್ತೋತ್ರಮಾಡ ಹತ್ತಿದರು. ಹಾವು ಟೊಂಕದವರೆಗೂ ನುಂಗಿತು. ಅಷ್ಟರಲ್ಲಿ ಶ್ರೀಪಾದರಾಯರ ಶಿಷ್ಯರು ಯಾರೋ ಅಲ್ಲಿಗೆ ಬಂದು ನೋಡುತ್ತಾರೆ, ವ್ಯಾಸರಾಯರ ಅರ್ಧದೇಹವು ಹಾವಿನ ಹೊಟ್ಟೆಯಲ್ಲಿ ಹೋಗಿದೆ! ಅವರು ಕಣ್ಣು ಬಿಡ ಹತ್ತಿದ್ದಾರೆ. ಈ ಅದ್ಭುತ ದೃಶ್ಯವನ್ನು ಕಂಡು ಗಾಬರಿಯಾಗಿ ಓಡಿಹೋದವರೇ ಶ್ರೀಪಾದರಾಯರಿಗೆ ಈ ವರ್ತಮಾನ ಹೇಳಿದರು. ಶ್ರೀಪಾದ

ರಾಯರು ಕೂಡಲೇ ಗುಹೆಗೆ ಬಂದು ನೋಡಲು ಘಟಸರ್ಪವೊಂದು ಬಿದ್ದಿದೆ. ವ್ಯಾಸರಾಯರು ಆದರ ಹೊಟ್ಟೆಯಲ್ಲಿ ಸಿಕ್ಕಿಕೊಂಡು ಹಿದ್ದಾಡ ಹತ್ತಿದ್ದಾರೆ. ಹಿಂದಕ್ಕೆ ಭೀಮಸೇನ ದೇವರನ್ನು ಸರ್ಪವು ನುಂಗಿದ ಭಾರತ ಕಥೆಯೂ ಶ್ರೀಪಾದರಾಯರ ನೆನಪಿಗೆ ಬಂತು. ಆ ಸರ್ಪವನ್ನು ಧರ್ಮರಾಜನು ಬಂದು ಬಿಡಿಸಿದಂತೆ ಈಗ ಅವರಾದರೂ ಸರ್ಪವನ್ನು ಕುರಿತು:—ಸರ್ಪದ ಭಾಷೆಯಿಂದಲೇ ಪ್ರಶ್ನಮಾಡಿ ಅದಕ್ಕೆ ತಕ್ಕ ಉತ್ತರ ವನ್ನು ಕೊಟ್ಟರು. ಸರ್ಪವು ಸಂತೋಷದಿಂದ ವ್ಯಾಸರಾಯರನ್ನು ಹೇಗೆ ನುಂಗಿತ್ತೋ ಹಾಗೆಯೇ ಬಿಟ್ಟು ಶ್ರೀಪಾದರಾಯರಿಗೆ ವಂದಿಸಿ ಹೊರಟು ಹೋಯಿತು. ವ್ಯಾಸರಾಯರು ಶೇಷಾವೇಶವುಳ್ಳ ಪ್ರಲ್ಹಾದಾಂಶರು.* ಪ್ರಲ್ಹಾದನಿಗೆ ಅವನ ತಂದೆಯಾದ ಹಿರಣ್ಯಕಶಿಪುವು ಸರ್ಪಗಳಿಂದ ಕಡಿಸಿ ದಾಗ್ಯಾದರೂ ಅವನಿಗೆ ಹೇಗೆ ಬಾಧೆಯಾಗಲಿಲ್ಲವೋ ಹಾಗೆಯೇ ಈಗಾ ದರೂ ವ್ಯಾಸರಾಯರಿಗೆ ಸರ್ಪಬಾಧೆಯಾಗಲಿಲ್ಲ. ವ್ಯಾಸರಾಯರು ಎದ್ದ ವರೇ ಗುರುಗಳಿಗೆ ವಂದಿಸಿ ಅವರನ್ನು ಅನೇಕ ರೀತಿಯಿಂದ ಸ್ತೋತ್ರ ಮಾಡಿದರು. ಇದನ್ನೆಲ್ಲ ಕಣ್ಣಾರೆ ಕಂಡ ಶ್ರೀಪಾದರಾಯರ ಇತರ ಶಿಷ್ಯ ರಂತೂ ಏನು ನಮ್ಮ ಗುರುಗಳ ಪ್ರಭಾವವೋ ಎಂದು ಗುರುಗಳ ಜಯ ಜಯಕಾರ ಮಾಡಿದರು.

ಇದೇ ಮಾತನ್ನೇ ಶ್ರೀನಿಧಿತೀರ್ಥರು ತಮ್ಮ ಶ್ರೀಪಾದರಾಜಾಷ್ಟಕ ದಲ್ಲಿ ಹೀಗೆ ಬಣ್ಣಿಸಿರುತ್ತಾರೆ:—

* ಈ ವಿಷಯದಲ್ಲಿ ಚಂದ್ರಿಕಾಚಾರ್ಯ ಚರಿತ್ರವು ಹೀಗೆ ಹೇಳುವದು.

"ರಾಮಾಚಾರ್ಯ ಸುಧೀಮಣೇರ್ದಯಿತಯಾಗರ್ಭೋದ್ಭವಃ ಶ್ರೀಮತೋ |
ಬ್ರಹ್ಮಣ್ಯಾಖ್ಯಯತೀಶಿತುಃಕರುಣಯಾ ಸಂವತ್ಸರೇಪ್ಯಾದಿಮೇ ||
ವೈಶಾಖಾದಿಮಪಕ್ಷಕೆ ದಿನಮಣೇರ್ವಾರೇದಿನೇ ಸಪ್ತಮೇ |
ಪ್ರಲ್ಹಾದೋಽವತತಾರಭೂಮಿವಲಯೇ ನಾಗಾಧಿಪಸ್ಯಾಂಶಭೃತ್" ||

ಇದೇ ಮಾತನ್ನೇ ಮಹನ್ನೀಯರಾದ ಶ್ರೀವಾದಿರಾಜರು ತಮ್ಮದೊಂದು ಪದ್ಯ ದಲ್ಲಿ ಹೀಗೆ ಬಣ್ಣಿಸುತ್ತಾರೆ —

"ಕನಕಕಶಿಪುತನಯನ ಘನ ಅಂಶದಿ | ಫಣಿಗಣರಮಣನಾವೇಶದಿ ಪೊಳೆ ಯುತ | ದಿನದಿನದಲಿ ಹರಿಯಮನದಣಿಸುತಲಿಹ | ಘನಮಹಿಮೆಯ ಯತಿಕುಲ ತಿಲಕನುನೀ" ||ಎದುರ್ಯಾರೊ | ಗುರುವೆ ಸಮರ್ಯಾರೊ ||

"ಶ್ರೀವ್ಯಾಸರಾಜ ಫಣಿಬಂಧನಿವಾರಕಾಯ ತದ್ಭಾಷಯೈವ ಫಣಿ
ರಾಜ ಸುತೋಷಕಾಯ ||
ಶ್ರೀಮತ್ಸ್ವರತ್ನಖಚಿತೋಜ್ವಲಕುಂಡಲಾಯ ಶ್ರೀಪಾದರಾಜ ಗುರವೇ
ಸ್ತು ನಮಃ ಶುಭಾಯ" ||

ಅಲ್ಲದೆ—ಶ್ರೀಪುರಂದರದಾಸರ ಪಟ್ಟಶಿಷ್ಯರೂ ಸಾಕ್ಷಾತ್ ಭೃಗುಋಷಿಗಳ ಅಂಶಭೂತರೂ ಆದ ಶ್ರೀವಿಜಯದಾಸರು ತಮ್ಮದೊಂದು ಉಗಾಭೋಗೆ ದಲ್ಲಿ ಹೀಗೆ ಹೇಳಿಕೊಂಡಿರುತ್ತಾರೆ:—

"ಪುರಂದರದಾಸರು ವೈಶ್ಯ ಮಾದಮ್ಮನಾವರಕುಮಾರನ ಬದುಕಿಸಿದರುಗಡಾ | ಗುರುವ್ಯಾಸಮುನಿರಾಯರು ಭೂಪತಿಗೆ ಬಂದ ದುಸ್ತರವಾದ ಕುಯೋಗವ ಬಿಡಿಸಿದರುಗಡಾ | ಶ್ರೀನಾರಾಯಣಯೋಗಿ ವ್ಯಾಸಮುನಿಗೆ ಬಂದ ಉರಗಬಾಧೆಯ ಕಳೆದು ಪಾಲಿಸಿದರುಗಡಾ | ಹರಿಯೆ ಈ ಕಲಿಯುಗದೊಳಗೆ ನಿನ್ನ ಶರಣರು ಇಂಥ ಚರಿತೆ ಮಾಡಿಪ್ಪರು- -" ||
ಲೋಕದಲ್ಲಿ ಹರಿಶರಣರೆಂಬ ಮಹಾತ್ಮರು ಅದ್ಭುತ ಲೀಲೆಗಳನ್ನೇ ತೋರಿಸಿರುತ್ತಾರೆ

ಒಮ್ಮೆ ವಾದಿರಾಜಗುರುಗಳು ಪಂಢರಪುರದ ಹತ್ತಿರ ಒಂದು ಹಳ್ಳಿಯಲ್ಲಿ ಇಳಿದುಕೊಂಡಿರಲು ಅಲ್ಲಿಯ ಒಬ್ಬ ರೈತನು ಬಂದು:—ಸ್ವಾಮೀ! ನಿಮ್ಮದೊಂದು ಬಿಳೀ ಕುದುರೆಯು ನನ್ನ ಕಡ್ಲಿಯ ಹೊಲವನ್ನೆಲ್ಲ ಮೇದುಬಿಟ್ಟಿರುವದು, ಎಂದು ದೂರು ಹೇಳಿದನು. ಆಗ ವಾದಿರಾಜರು:- ಅಪ್ಪಾ! ನಮ್ಮ ಉಪಾಸ್ಯ ದೇವತೆಯಾದ ಹಯಗ್ರೀವ ಸ್ವಾಮಿಯೇ ನಿನ್ನ ಮೇಲೆ ಅನುಗ್ರಹಮಾಡಿರುವನು. ನೀನೇನೂ ಯೋಚನೆ ಮಾಡಬೇಡ. ಸಾಮಾನ್ಯ ಕಡ್ಲೆಗೆ ಬದಲಾಗಿ ಬಂಗಾರದ ಕಡ್ಲೆಗಳೇ ನಿನ್ನ ಹೊಲದಲ್ಲಿ ಬೆಳೆದಿವೆ ಹೋಗು, ಅಂದುಬಿಟ್ಟರು. ರೈತನು ಅಷ್ಟಕ್ಕೇ ಸುಮ್ಮನಾಗಿ ಮರುದಿನ ಮುಂಜಾನೆ ಹೊಲಕ್ಕೆ ಬಂದು ನೋಡಲು, ನಿಜವಾಗಿಯೂ ಬಂಗಾರದ ಕಡ್ಲೆಗಳೇ ಆಗಿದ್ದವಂತೆ!

ಶ್ರೀ ಮಂತ್ರಾಲಯಮಠದ ಜಿತಾಮಿತ್ರರೆಂಬ ಸ್ವಾಮಿಗಳವರು ಒಮ್ಮೆ ಶಿಷ್ಯರಿಂದ ಸಹಿತರಾಗಿ ಕೃಷ್ಣಾನದಿಯ ಉಸುಕಿನಲ್ಲಿ ಜಪಕ್ಕೆ ಕುಳಿತಿರಲು ಒಮ್ಮಿಂದೊಮ್ಮೆ ನದಿಯ ನೀರು ಏರಹತ್ತಿತು. ಅದನ್ನು ಕಂಡು ಶಿಷ್ಯರು:—ಸ್ವಾಮೀ! ನದಿಯು ಬರಹತ್ತಿದೆ. ದಂಡೆಗೆ ದಯಮಾಡಿಸ

ಬೇಕೆಂದು ಹೇಳಲು, ಕೃಷ್ಣವೇಣಿಯು ನಮಗೆ ದರ್ಶನ ಕೊಡಲಿಕ್ಕೆ ಬಂದಿರುವಳು. ನೀವು ಹೆದರುವ ಕಾರಣವಿಲ್ಲೆಂದು ಹೇಳಿ ಅಲ್ಲಿಯೇ ಕುಳಿತುಬಿಟ್ಟರು. ಆದರೇನು? ಶಿಷ್ಯರು ಗಾಬರಿಯಿಂದ ಓಡಿ ಬಂದು ದಂಡೆಗೆ ಹತ್ತಿದರು. ಕೃಷ್ಣವೇಣಿಯು ಪೂರ್ಣಪ್ರವಾಹದಿಂದ ಹರಿಯ ಹತ್ತಿದಳು ಮುಂದೆ ಏಳು ದಿವಸದ ಮೇಲೆ ನದಿಯು ಪ್ರವಾಹವಿಳಿದು ಮೊದಲಿನಂತಾಗಲು, ಶಿಷ್ಯರು ಬಂದು ನೋಡುತ್ತಾರೆ, ಸ್ವಾಮಿಗಳವರು ಜಪ ಮಾಡುತ್ತ ಹಾಗೇ ಕುಳಿತಿದ್ದರಂತೆ.

ಹೀಗೆ ಭಗವಂತನು ತನ್ನ ಭಕ್ತರಿಂದ ಅನೇಕ ಕಾಲಗಳಲ್ಲಿ ಅನೇಕ ಲೀಲೆಗಳನ್ನು ಮಾಡಿಸಿರುವನು. ಇನ್ನೂ ಮಾಡಿಸುತ್ತಿರುವನು. ಮುಂದಾದರೂ ಮಾಡಿಸುವನು. ಇದನ್ನು ತಿಳಿದುಕೊಂಡು ನಾವು ಆ ಸ್ವಾಮಿಯಲ್ಲಿ ನೈಜವಾದ ಭಕ್ತಿಯನ್ನಿಟ್ಟರೇನೇ ನಮ್ಮ ಮಾನುಷಜನ್ಮವು ಸಾರ್ಥಕ; ನಮ್ಮದೊಂದು ಬಾಳು. ಇಲ್ಲದಿದ್ದರೆ ಈ ಜನ್ಮವೇ ಹಾಳು. ಅಂತೆಯೇ ದಾಸರಾಯರು:—

ನಿಚ್ಚ ಸುಭಕುತಿಯೊಳಚ್ಯುತನಂಘ್ರಿಗೆ| ಕರ್ಚಿಸಿ ಮೆಚ್ಚಿಸುತಿಚ್ಚರದಿ||
ತುಚ್ಛವಿಷಯಗಳನಿಚ್ಛಿಸದೆಯ| ದೃಚ್ಛಲಾಭದಿಂ ಪ್ರೋಚ್ಛನಾಗುವದೆ||
ಫಲವಿದು ಬಾಳ್ದದಕೆ|ಸಿರಿ|ನಿಲಯನಗುಣಗಳತಿಳಿದು ಭಜಿಸುವುದೆ||
ಜಗನ್ನಾಥರಾಯರು ಹೀಗೆ ಕೂಗಿಕೊಂಡಿರುತ್ತಾರೆ.

## ೨ ಭಾಗೀರಥಿಯು ಪ್ರತ್ಯಕ್ಷಳಾದದ್ದು.

ಶ್ರೀಪಾದರಾಯರು ಮುಳಬಾಗಿಲದಲ್ಲಿರುವಾಗ ಅವರಿಗೆ ಕಾಶಿಗೆ ಹೋಗಿ ಗಂಗಾಸ್ನಾನ ಮಾಡಿಕೊಂಡು ಬರಬೇಕೆಂಬ ಇಚ್ಛೆ ಹುಟ್ಟಿತು. ಭಾರತೀಯರ ತಿಳುವಳಿಕೆಯಂತೆ ಕಾಶೀಕ್ಷೇತ್ರವೂ, ಭಾಗೀರಥೀತೀರ್ಥವೂ ಭಾರತವರ್ಷದಲ್ಲಿ ಪರಮಪವಿತ್ರವಾದವುಗಳು

ಯದಾವರ್ಣಯೇತ್ಕರ್ಣಮೂಲೇಽಪಿಕಾಲೇ ಶಿವೋರಾಮ ರಾಮೇತಿ
ರಾಮೇತಿ ಕಾಶ್ಯಾಂ ||
ತದೇಕಂ ಪರಂ ತಾರಕ ಬ್ರಹ್ಮರೂಪಂ ಭಜೇಽಹಂ ಭಜೇಽಹಂ
ಭಜೇಽಹಂ ಭಜೇಽಹಂ ||
(ಶ್ರೀ ರಾಮ ಭುಜಂಗ ಸ್ತೋತ್ರ) ಶ್ರೀಶಂಕರಾಚಾರ್ಯಕೃತ

(ಪ್ರಾಣಿಗಳು ಕಾಶಿಯಲ್ಲಿ ಪ್ರಾಣ ಬಿಡುವುದಾದರೆ, ಆ ಸಮಯ ದಲ್ಲಿ ಸಾಕ್ಷಾದ್ವಿಶ್ವೇಶ್ವರನೇ ಬಂದು, ಆ ಸನ್ನಿಹಿತ ಮೃತ್ಯುಪ್ರಾಯರಾದ ಪ್ರಾಣಿಗಳ ಕಿವಿಯಲ್ಲಿ ತಾರಕಮಂತ್ರ(ರಾಮಮಂತ್ರ)ವನ್ನು ಉಪದೇಶಿಸು ವದು ಸರಿಯಷ್ಟೆ? ಅಂತಹ ತಾರಕಬ್ರಹ್ಮಸ್ವರೂಪನಾದ ಶ್ರೀರಾಮಚಂದ್ರ ನನ್ನು ನಾನು ಸೇವಿಸುತ್ತೇನೆ)

"ಸರ್ವತೀರ್ಥಮಯೀ ಗಂಗಾ, ಸರ್ವ ದೇವಮಯೋ ಹರಿಃ||
ಸರ್ವವೇದಮಯೀ ಗೀತಾ, ಸರ್ವಶಾಸ್ತ್ರಮಯೋ ಮನುಃ" ||
(ಹಾರೀತ ಸ್ಮೃತಿ)

ಸರ್ವ ತೀರ್ಥಗಳಲ್ಲಿ ಭಾಗೀರಥಿಯೂ, ಸರ್ವ ದೇವರಲ್ಲಿ ಶ್ರೀ ಹರಿ ಯೂ, ಸರ್ವವೇದದ ಅರ್ಥವನ್ನು ಹೇಳುವದರಲ್ಲಿ ಗೀತೆಯೂ, ಸರ್ವ ಶಾಸ್ತ್ರದ ಸಾರವನ್ನು ಹೇಳುವದರಲ್ಲಿ ಮನುಸ್ಮೃತಿಯೂ ಅಧಿಕವು)

ಈ ರೀತಿಯಾಗಿ ಬಹು ಮುಖದಿಂದ ಈ ಕ್ಷೇತ್ರ-ತೀರ್ಥಗಳೂ ವರ್ಣಿಸಲ್ಪಟ್ಟಿರುವವು ಅಂದಮೇಲೆ ಇಂತಹ ಮಹಾಯಾತ್ರೆಗೆ ಹೋಗುವ ಅಪೇಕ್ಷೆಯು ಯಾರಿಗೆ ಹುಟ್ಟಲಿಕ್ಕಿಲ್ಲ? ಅದರಲ್ಲಿಯೂ ಕೇವಲ ಭಕ್ತಿ ಯೋಗವಿಶಿಷ್ಟರಾದ-ಮಹಾನುಭಾವರಾದ-ಶ್ರೀಪಾದರಾಯರಿಗೆ ಇಂತಹ ಅಪೇಕ್ಷೆಯು ಹುಟ್ಟಿದ್ದು ಏನಾಶ್ಚರ್ಯ! ಆಗ ಅವರು ಇಂಥ ದಿವಸ ಹೊರಡತಕ್ಕದ್ದೆಂದು ನಿರ್ಣಯಿಸಿದರು.

'ಭಕ್ತ್ಯೈಕವಶ್ಯಃ ಪುರುಷೋತ್ತಮೋಽಸೌ' ||

ಎಂಬಂತೆ ಭಕ್ತರ ಕೈವಾರಿಯಾದ ಭಗವಂತನಿಗೆ ತನ್ನವರ ಮೇಲೆ ಇನ್ನೆಷ್ಟು ಪ್ರೀತಿಯೋ ತಿಳಿಯದು. ಮರುದಿನವೇ ಶ್ರೀಪಾದರಾಯರಿಗೆ ಸ್ವಪ್ನವಾಯಿತು ಸ್ವಪ್ನದಲ್ಲಿ ಸಾಕ್ಷಾತ್ ಭಾಗೀರಥಿಯೇ ಬಂದು:— "ನೀವು ಬಹು ದೂರವಾದ ಕಾಶಿಗೆ ಬರುವ ಅವಶ್ಯಕತೆಯಿಲ್ಲ. ನಾನೇ ನೀವಿದ್ದಲ್ಲಿಗೆ ಬಂದು ದರ್ಶನ ಕೊಡುತ್ತೇನೆ. ನೃಸಿಂಹತೀರ್ಥದ ಈಶಾನ್ಯ ಮೂಲೆಯೊಳಗೆ ಇಂಥ ದಿವಸ ಇಷ್ಟೊತ್ತಿಗೆ ನಾನು ಪ್ರತ್ಯಕ್ಷಳಾಗುವೆನು. ಕಾದುಕೊಂಡಿರಬೇಕು." ಎಂದು ಹೇಳಿದ ಹಾಗೆ ಬೋಧೆಯಾಯಿತು. ಶ್ರೀ ಪಾದರಾಯರು ತಮ್ಮ ಮೇಲೆ ತೋರಿದ ಭಗವಂತನ ಕಾರುಣ್ಯಕ್ಕೆ ಬೆರ ಗಾಗಿ ಕುಳಿತರು. ಸದ್ಯಕ್ಕೆ ಅವರ ಕಾಶೀಯಾತ್ರೆಯು ನಿಂತಂತಾಯಿತು. ಕೂಡಲೇ ಊರಲ್ಲೆಲ್ಲಾ ಸುದ್ದಿ. ಗುರುಗಳಿಗೆ ಭಾಗೀರಥಿಯು ಪ್ರತ್ಯಕ್ಷ

ಳಾಗುವಳೆಂದು ಜನರೆಲ್ಲರೂ ಕುತೂಹಲವಿಶಿಷ್ಟರಾದರು. ಭಾಗೀರಥಿಯು ಬರುವ ದಿನವನ್ನೇ ಎಣಿಕೆಹತ್ತಿದರು. ಆ ದಿವಸವೂ ಬಂತು. ಊರಿಗೆ ಹಿಂದು ಹಿಂದೂವರೆ ಮೈಲು ದೂರದಲ್ಲಿರುವ ದೂರ್ವಾಸ ಋಷಿಗಳಿಂದ ಸ್ಥಾಪಿತವಾದ ನೃಸಿಂಹದೇವರ ಗುಡಿಯು ಹತ್ತರ ಇರುವ ನೃಸಿಂಹತೀರ್ಥದ ಬಳಿಯಲ್ಲಿ ಚುಮು ಚುಮು ನಸಕು ಹರಿಯುವದರೊಳಗಾಗಿಯೇ ಜನಸಂದಣಿಯು ಕೂಡಿತು. ಗಂಡಸರೂ, ಹೆಂಗಸರೂ, ಹುಡುಗರೂ ನೆರೆದರು. ಶ್ರೀಪಾದರಾಯರಾದರೂ ತಮ್ಮ ಪ್ರಾತರಾಹ್ನಿಕಗಳನ್ನೆಲ್ಲ ತೀರಿಸಿಕೊಂಡು ಭಾಗೀರಥಿಯನ್ನು ಸ್ತೋತ್ರ ಮಾಡುತ್ತ ನೃಸಿಂಹತೀರ್ಥದ ಹತ್ತರ ಬಂದರು. ಇನ್ನೇನು! ಭಾಗೀರಥಿಯು ಬರುವದೊಂದೇ ಉಳಿಯಿತು ಎಲ್ಲರೂ ಅದನ್ನೇ ನಿರೀಕ್ಷಣೆ ಮಾಡುತ್ತ ಕುಳಿತರು. ಹಿಸ್ಮಿಂದೊಮ್ಮೆ ಪ್ರಲ್ಹಾದನ ನುಡಿಗೆ ಪರಮಾತ್ಮನು ಖಂಬವನ್ನೊಡೆದು ಬಂದಂತೆ ಶ್ರೀಪಾದರಾಯರ ಸ್ತೋತ್ರಕ್ಕೆ ನೃಸಿಂಹತೀರ್ಥದ ಈಶಾನ್ಯ ಮೂಲೆಯಲ್ಲಿ ಬಂಡೆಯನ್ನೊಡೆದು ಭಾಗೀರಥಿಯು ಬಂದು ಬಿಟ್ಟಳು! ಕೂಡಲೆ ಶ್ರೀಪಾದರಾಯರು ಅತ್ಯಂತ ಭಯಭಕ್ತಿಯಿಂದ ಭಾಗೀರಥಿಗೆ ಸಾಷ್ಟಾಂಗ ಹಾಕಿ ಆ ನಿರ್ಮಲ ಜಲದಲ್ಲಿ ಸ್ನಾನ ಮಾಡಿ ಅರಿಷಿಣ ಕುಂಕುಮಾದಿ ಪರಿಮಳ ದ್ರವ್ಯಗಳಿಂದ ಪೂಜಿಸಿದರು; ಮತ್ತು ದಿವ್ಯವಾದ ಮರದ ಬಾಗಿಣಗಳನ್ನು ಕೊಡುವದಕ್ಕೆಂದು ಸಿದ್ಧವಾದ ಬಾಗಿಣಗಳನ್ನು ಕೈಯಲ್ಲಿ ಹಿಡಿದುಕೊಂಡು:—'ಅಮ್ಮಾ ಭಾಗೀರಥೀ, ತಾಯೇ! ನಾನು ಕೊಡುವ ಈ ಅಲ್ಪ ಬಾಗಿಣಗಳನ್ನು ಸ್ವೀಕರಿಸಿ ನನ್ನ ಮೇಲೆ ಅನುಗ್ರಹ ಮಾಡು.' ಹೀಗೆಂದು ದೀನವಾಣಿಯಿಂದ ಬೇಡಿಕೊಂಡು ತೀರ್ಥದಲ್ಲಿ ಪ್ರವೇಶ ಮಾಡಲು, ಭಾಗೀರಥಿಯು ಪ್ರತ್ಯಕ್ಷ ತನ್ನ ರತ್ನದ ಕಂಕಣಗಳುಳ್ಳ ಕೈಗಳಿಂದಲೇ ಬಾಗಿಣವನ್ನು ಸ್ವೀಕರಿಸಿದಳು. ಅಹಹಾ! ಆಗಿನ ಕಲ ಕಲವನ್ನು ಏನೆಂದು ಹೇಳೋಣ! ಜನರೆಲ್ಲರೂ ಈ ಅದ್ಭುತ ದೃಶ್ಯವನ್ನು ಕಂಡು ಭಾಗೀರಥಿಯು ಜಯ ಜಯಕಾರವನ್ನೂ ಗುರುಗಳ ಕೀರ್ತನವನ್ನೂ ಮಾಡಹತ್ತಿದರು. ಮಂಗಳ ವಾದ್ಯಗಳು ಭೋರ್ಗರೆಯ ಹತ್ತಿದವು. ಮುತ್ತೈದೆಯರು ಅರಿಷಿಣ-ಕುಂಕುಮಾದಿಗಳಿಂದ ಭಾಗೀರಥಿಯನ್ನು ಪೂಜಿಸಹತ್ತಿದರು. ಶ್ರೀಪಾದರಾಯರಂತೂ ಕಣ್ಣಲ್ಲಿ ಆನಂದ ಬಾಷ್ಪಗಳನ್ನು ಸುರಿಸುತ್ತ ಭಾಗೀರಥೀ ಸ್ತೋತ್ರದಲ್ಲಿಯೇ ತಲ್ಲೀನರಾಗಿ ನಿಂತುಬಿಟ್ಟರು. ಮುಂದೆ ಎಷ್ಟೋಹೊತ್ತು ಜನರ ಸ್ನಾನಾಹ್ನಿಕಗಳು ನಡೆ

ದವು. ಶ್ರೀಪಾದರಾಯರು ಆ ಹೊತ್ತು ಅಲ್ಲಿಯೇ ದೇವರ ಪೂಜೆಯನ್ನು ಮಾಡಿಕೊಂಡು ಬಂದ ಬ್ರಾಹ್ಮಣ ಸುವಾಸಿನಿಯರಿಗೆಲ್ಲ ಊಟ ಉಪಚಾರಾದಿಗಳಿಂದ ತೃಪ್ತಿಬಡಿಸಿದರು.

ಮಹಾತ್ಮರ ಚರಿತ್ರವೆಲ್ಲ ಚಿತ್ರವಿಚಿತ್ರವೇ ಆಗಿರುವದು. ಒಮ್ಮೆ ಬೇಸಿಗೆಯ ಕಾಲದಲ್ಲಿ ಶ್ರೀ ರಘುನಾಥತೀರ್ಥರೆಂಬ ಸ್ವಾಮಿಗಳು ಗಂಗಾಯಾತ್ರೆಗೆ ಹೋಗಬೇಕೆಂದು ಮಾರ್ಗವಶಾತ್ ಕಂಪಲಿಗೆ ಬಂದು ತುಂಗಭದ್ರಾಸ್ನಾನಕ್ಕೆ ಹೋಗಲು ತುಂಗಭದ್ರೆಯು ಮಳೆಗಾಲದಲ್ಲಿ ಹರಿಯುತ್ತಿದ್ದಂತೆ ಎರಡೂ ದಡಗಳಲ್ಲಿ ತುಂಬಿ ಹರಿಯುತ್ತಿತ್ತು. ಆಗ ಅವರ ಸಂಗಡಲಿದ್ದ ಶ್ರೀ ವ್ಯಾಸರಾಯರು:—ಗಂಗಾಯಾತ್ರೆಗೆ ನೀವು ಹೋಗುವ ಕಾರಣವಿಲ್ಲ. ಅಂತೆಯೇ ನೀವಿದ್ದಲ್ಲಿಗೆ ಬಂದಿರುತ್ತಾಳೆ ಅಂದರಂತೆ. ಇದೇ ರೀತಿ ಪ್ರವಾಹವು ಮೂರು ದಿವಸವಿದ್ದು ರಘುನಾಥ ತೀರ್ಥರು ಭಾಗೀರಥೀ ಸ್ನಾನವನ್ನು ಅಲ್ಲಿಯೇ ಮಾಡಿದರು!

ಇದರಂತೆ ಸವಣೂರಲ್ಲಿ ಶ್ರೀ ಸತ್ಯಬೋಧ ಸ್ವಾಮಿಗಳವರಿಗೂ—ಹೊಳೆಹೊನ್ನೂರಲ್ಲಿ ಶ್ರೀ ಸತ್ಯಧರ್ಮ ಸ್ವಾಮಿಗಳವರಿಗೂ—ಕಾಶಿಯಲ್ಲಿ ಶ್ರೀ ಸತ್ಯಸಂಧ ಸ್ವಾಮಿಗಳಿಗೂ ಭಾಗೀರಥಿಯು ಪ್ರತ್ಯಕ್ಷಳಾಗಿರುವಳು.

ಅಂತೆಯೇ ಮಹನ್ನೀಯರಾದ ಶ್ರೀ ಜಗನ್ನಾಥ ದಾಸರಾಯರು:—

ಶ್ರೀವರನಿಗಭಿಷೇಕವೆಂದರಿ | ದೀವಸುಂಧರೆಯೊಳಗೆ ಬಲ್ಲವ |
ರಾವಜಲದಲಿಮಿಂದರೆಯು ಗಂಗಾದಿತೀರ್ಥಗಳು ||
ತಾವಲಿದು ಬಂದಲ್ಲೆ ನೆಲೆಸಿಹ | ದೇವವಖಿಳಾರ್ಥಗಳ ನರಿಯದ |
ಜೀವರಮರತರಂಗಿಣಿಯು ನೈದಿಪರೆ ಫಲವೇನು ||

ಎಂಬದಾಗಿ ಹೇಳಿಕೊಂಡಿದ್ದಾರೆ. (ಹರಿಕಥಾಮೃತಸಾರ)

---

## ೩ ಬ್ರಹ್ಮಹತ್ಯಾದೋಷವನ್ನು ಕಳೆದದ್ದು.

ಒಮ್ಮೆ ಒಬ್ಬ ಬ್ರಾಹ್ಮಣನಿಗೆ ಬ್ರಹ್ಮಹತ್ಯಾದೋಷವು ಬಂದಿತ್ತು. ಅದಕ್ಕೆ ಪ್ರಾಯಶ್ಚಿತ್ತವೇನೆಂದು ಆತನು ಅನೇಕ ದೊಡ್ಡ ದೊಡ್ಡ ಪಂಡಿತಪ್ರಕಾಂಡರಲ್ಲಿ ಹೋಗಿ ದೀನವಾಣಿಯಿಂದ ಕೇಳಿಕೊಂಡನು. ಬ್ರಹ್ಮಹತ್ಯಾದೋಷವೆಂದರೆ, ಬಹು ಭಯಂಕರವಾದದ್ದು. ಇತರ ದೋಷ

ಗಳಂತೆ ಅದಕ್ಕೆ ಅಲ್ಪ ಪ್ರಾಯಶ್ಚಿತ್ತವಿಲ್ಲ ದೇಹಾಂತ ಪ್ರಾಯಶ್ಚಿತ್ತ ವೊಂದೇ ಮಾರ್ಗವೆಂದು ಹೇಳಿದರು. ಬ್ರಾಹ್ಮಣನು ಹೌಹಾರಿ ಹೋದನು. ಆಲೋಚನೆ ಮಾಡಿದನು. ಆತನಿಗೆ ಹೀಗೆ ಕಂಡು ಬಂತು:—

"ಸದ್ಯಃಪಾಪವಿಶುದ್ಧಾಸ್ಸ್ಯಾದ್ಯಥಾ ಗೋಕರ್ಣ ದರ್ಶನಾತ್ ||
ಅಪಿಪಾಪಶತಂಕೃತ್ವಾ ಬ್ರಹ್ಮಹತ್ಯಾದಿಪಾತಕಃ"||
(ಗೋಕರ್ಣ ಮಾಹಾತ್ಮ್ಯ)

"ಈ ಭರತಖಂಡದೊಳಗುಳ್ಳ ತೀರ್ಥ-ಕ್ಷೇತ್ರ |
ವೈಭವಾಬ್ಜಭವಾಂಡ ಪೌರಾಣದೊಳಗೆ ಹರಿ |
ನಾಭಿಸಂಭವಪೇಳ್ದ ನಾರದನಿಗಿನಿತೆಂದು ಪರಮ ಕಾರುಣ್ಯದಿಂದಾ||
ಶ್ರೀ ಬಾಲನಿಸ್ರಮಾತಾ-ಪಿತೃಗಳ ಧನ |
ಲೋಭದಿಂದಲಿ ಕೊಂದಪಾತಕವ ಪರಿಹರಿಸಿ |
ಶ್ರೀ ಭವಾನೀಜನಗನಾಥ ವಿಠ್ಠಲ ಪ್ರೀತಿವ ಬೇಡಿದಿಪ್ಪಾ ಥವಿತ್ತು"||
(ತೀರ್ಥ-ಕ್ಷೇತ್ರ ಮಾಹಾತ್ಮ್ಯೆ)

ಎಂಬಂತೆ ಭಗವಂತನ ಅಂಶಮಾತ್ರವನ್ನೊಳಗೊಂಡ ತೀರ್ಥ-ಕ್ಷೇತ್ರಗಳೇ ಬ್ರಹ್ಮಹತ್ಯಾದಿ ದೋಷವನ್ನು ನಾಶಪಡಿಸುತ್ತಿರುವಾಗ ಸಾಕ್ಷಾತ್ ಭಗವನ್ನಾಮಸ್ಮರಣೆಯಂತೂ ಇನ್ನೇನನ್ನು ತಾನೇ ಮಾಡದು? ಅದರಲ್ಲಿರುವ ಶಕ್ತಿಯಾದರೋ—

ಶ್ರೀಮುಕುಂದನ ಪರಮ ಮಂಗಳ | ನಾಮನರಕಸ್ಥರನ ಸಲಹಿತು |
ಪಾಮರರ ಪಂಡಿತರೆನಿಸಿ ಪುರುಷಾರ್ಥ ಕೊಡುತಿಹುದು ||

ಅಲ್ಲದೆ

ಶ್ರವಣಮನಕಾನಂದವೀವುದು | ಭವಜನಿತ ದುಃಖಗಳಕಳೆವುದು |
ವಿವಿಧಭೋಗಗಳಿಹಪರಂಗಳಲಿತ್ತು ಸಲಹುವದು ||

ಎಂಬ ಜಗನ್ನಾಥದಾಸರಾಯರ ಉಕ್ತಿಯಂತೆ ಅತ್ಯದ್ಭುತವಾದದ್ದು; ಅತ್ಯಾಶ್ಚರ್ಯಕರವಾದದ್ದು. ಅಂತೆಯೇ ನಮ್ಮ ಪೂರ್ವಿಕರು:—

ಅಭಕ್ಷ್ಯಭಕ್ಷಣಾತ್ಪ್ರಾಪ್ತಮಗಮ್ಯಾಗಮನಾದಿಜಂ ||
ನಶ್ಯತೇನಾತ್ರ ಸಂದೇಹೋ ಗೋವಿಂದಸ್ಯಚ ಕೀರ್ತನಾತ್ ||

.... .... .... .... ....

ಸ್ವರ್ಣವರ್ಣಸ್ತೇಯಂ ಸುರಾಪಾನಂ ಗುರುದಾರಾಭಿದರ್ಶನಂ ||
ಗೋವಿಂದ ಕೀರ್ತನಾತ್ ಸದ್ಯಃ ಪಾಪಂ ಯಾತಿ ಮಹಾಮುನೆ ||
.... .... .... .... ....
ರೋಗವಿಘ್ನಹತಶ್ಚೈವ ಬ್ರಹ್ಮಹಾ ಗುರುತಲ್ಪಗಃ ||
ಸ್ತ್ರೀಹತ್ಯಾಬಾಲ ಘಾತೀಚ ಸುರಾಪೀ ವೃಷಲೀಪತಿಃ ||
ಮುಚ್ಯತೇ ಸರ್ವಪಾಪೇಭ್ಯೋಯಃ ಪಠೇನ್ನಾತ್ರ ಸಂಶಯಃ ||

ಇತ್ಯಾದ್ಯನೇಕ ರೀತಿಯಿಂದ ಭಗವನ್ನಾಮಸ್ಮರಣಸಾಮರ್ಥ್ಯವನ್ನು ಹೊಗಳಿರುತ್ತಾರೆ. ಅಂದಮೇಲೆ ಇಂತಹ ಭಗವಂತನ ನಾಮಸ್ಮರಣೆಯು ನನ್ನೀ ಅಲ್ಪವಾದ ಬ್ರಹ್ಮಹತ್ಯೆಯನ್ನು ಹೋಗಲಾಡಿಸಲಾರದೇ? ಹಿಂದಕ್ಕೆ ಪಾತಕಿಗಳಲ್ಲಿಮಹಾಪಾತಕಿಯಾದ ಅಜಾಮಿಳನು ಒಂದೇಒಂದು ಬಾರಿಯು ಭಗವಂತನ ನಾಮಸ್ಮರಣದಿಂದ (ಅದೂ ಪೂರ್ಣನಾಮಸ್ಮರಣವಲ್ಲ. ಎಲ್ಲಿಯೋ ಒಂದೆರಡು ಅಕ್ಷರಗಳುಳ್ಳದ್ದು.) ಮುಕ್ತಿಪಥವನ್ನು ಹೊಂದಲಿಲ್ಲವೆ? ಬೇಡಜಾತಿಯವನಾಗಿ ಕ್ರೂರಹಿಂಸಾಕೃತ್ಯದಿಂದ ಉದರಪೋಷಣೆ ಮಾಡಿಕೊಳ್ಳುತ್ತಿದ್ದಂಥವನು, ನಾರದರ ಉಪದೇಶವಾಗಲು, ಕೇವಲ ಪರಮಾತ್ಮನ ನಾಮಸ್ಮರಣದಿಂದಲೇ ಮಹಾಕವಿ ವಾಲ್ಮೀಕಿಯಾಗಲಿಲ್ಲವೇ? ನಾನೇಕೆ ಪರಿಶುದ್ಧನಾಗಕೂಡದು? ಇವರಿಗಿಂತಲೂ ನಾನು ಮಾಡಿದ ಪಾಪಕಾರ್ಯವು ಅಧಿಕವಾದುದೇ! ಹೀಗೆಂದು ಮುಂತಾಗಿ ಯೋಚಿಸುತ್ತಿರಲು, ಅಷ್ಟರಲ್ಲಿ ಮಹನ್ನೀಯರಾದ ಶ್ರೀಪಾದರಾಯರ ನೆನಪು ಬಂತು. ಆಹಾ! ನಾನೆಂಥ ಮೂರ್ಖನು? ಮಹಾತ್ಮರಾದ ಶ್ರೀಪಾದರಾಯರಿರಲು, ಸುಮ್ಮನೆ ಇಲ್ಲಿಯ ವರೆಗೆ ಯೋಚಿಸಿದೆನಲ್ಲ! ಅವರ ಬಳಿಗೆ ಹೋದುದಾದರೆ ನಿಶ್ಚಯವಾಗಿ ನನ್ನೀ ಬ್ರಹ್ಮಹತ್ಯಾ ದೋಷವು ದೂರಾಗುವದರಲ್ಲಿ ಸಂಶಯವಿಲ್ಲ ಹಿಂದಕ್ಕೆ ಸತ್ಪುರುಷ ಶಿಖಾಮಣಿಗಳಾದ ಶ್ರೀ ಅಕ್ಷೋಭ್ಯ ತೀರ್ಥರ ಹತ್ತರ ಹೀಗೆಯೇ ಇಬ್ಬರು ಬ್ರಹ್ಮಹತ್ಯಾ ದೋಷಿಗಳಾದ ಬ್ರಾಹ್ಮಣರು ಹೋಗಿ ಅವರ ಮೊರೆಬಿದ್ದು ತಮ್ಮ ದೋಷವನ್ನು ಕಳೆಕೊಂಡರೆಂದು ಅವರ ಚರಿತ್ರದಿಂದ ತಿಳಿಯುತ್ತಿರುವದು. ಅಂದಮೇಲೆ ನಾನೇಕೆ ಯೋಚನೆ ಮಾಡಬೇಕು? ಅಂದವನೇ ತಕ್ಷಣ ಶ್ರೀಪಾದರಾಯರಿದ್ದಲ್ಲಿಗೆ ಹೊರಟು ಬಿಟ್ಟನು ಮುಳಬಾಗಿಲವು ಬಂತು ಶ್ರೀಪಾದರಾಯರು ಶಿಷ್ಯರಿಗೆ ಪಾಠಪ್ರವಚನ ಹೇಳುತ್ತ ಕುಳಿತಿದ್ದರು. ಹೋಗಿ ಸಾಷ್ಟಾಂಗ

ವಾಗಿ ವಂದಿಸಿ ತನ್ನ ವೃತ್ತಾಂತವನ್ನೆಲ್ಲ ಬಿನ್ನವಿಸಿಕೊಂಡನು ಬ್ರಾಹ್ಮಣನಿಗಾದ ಪಶ್ಚಾತ್ತಾಪವನ್ನು ಕಂಡು ಶ್ರೀಪಾದರಾಯರಿಗೆ ಈತನನ್ನು ದೋಷಮುಕ್ತನನ್ನಾಗಿ ಮಾಡಬೇಕೆಂಬ ಬುದ್ಧಿಯು ಹುಟ್ಟಿತು. ಕೂಡಲೆ ಹಿಂದೇಮಾತು ಹೇಳಿಬಿಟ್ಟರು "ನಾಳಿನಿಂದ ನಮ್ಮ ದೇವತಾರ್ಚನೆಯ ಕಾಲಕ್ಕೆ ಎದುರಿಗೆ ಬಂದು ಕುಳಿತುಕೋ. ಅಂದರೆ ನಿನ್ನ ಬ್ರಹ್ಮಹತ್ಯಾ ದೋಷವು ದೂರಾಗುವದು." ಬ್ರಾಹ್ಮಣನಿಗಾದ ಸಂತೋಷವನ್ನು ಎಷ್ಟೆಂದು ಹೇಳೋಣ! ಫಾಶೀ ಶಿಕ್ಷೆಯಾದವನನ್ನು ಬಿಡುಗಡೆ ಮಾಡಿದಂತಾಯಿತು! ಅವನಿಗೆ ಅವರ ಹೇಳಿಕೆಯು ಮೇಲಿಯೇ ಅಷ್ಟೊಂದು ದೃಢವಿಶ್ವಾಸ. ನಂಬುಗೆ. ಅದರಲ್ಲಿ ಎಳ್ಳಷ್ಟಾದರೂ ಅಪನಂಬುಗೆಯೆಂಬುದಿಲ್ಲ ಅಹಾ! ಇಲ್ಲಿಯ ವರೆಗೆ ವಿಚಾರ ಮಾಡಿದ್ದಗಲ್ಲಿ ಪರಮ ಪಂಡಿತ ಶಿಖಾಮಣಿಗಳಾದವರೂ ಕೂಡಾ ದೇಹಾಂತಪ್ರಾಯಶ್ಚಿತ್ತವಾದ ಹೊರತು ಬೇರೊಂದಿಲ್ಲವೆಂದು ಹೇಳುತ್ತ ಬಂದಿದ್ದರು. ಇಂದಾದರೋ ಶ್ರೀಪಾದರಾಯರು ಇಷ್ಟೊಂದು ಸುಲಭೋಪಾಯವನ್ನು ಹೇಳಿಬಿಟ್ಟರಲ್ಲ! ಅಬ್ಬಾ! ಮಹಾನುಭಾವರಾದವರಲ್ಲಿ ಇನ್ನೆಷ್ಟು ಸಾಮರ್ಥ್ಯವಿರುವದೋ? ದೇವರನ್ನೇ ಕುಣಿಸುವವರಿಗೆ ಇದಾವ ಗಿಡದ ತೊಪ್ಪಲು? ಹೀಗೆಂದು ಸಂತೋಷಾತಿಶಯದಿಂದ ಬ್ರಾಹ್ಮಣನು ಹಿಗ್ಗಿ ಹಿಗ್ಗಿ ಹೀರೀಕಾಯಿಯಾದನು. ಇದನ್ನೆಲ್ಲ ಕೇಳಿದ ಶ್ರೀಪಾದರಾಯರ ಶಿಷ್ಯರು ಮಾತ್ರ ಮಹಾ ಯೋಗೀಶ್ವರರಾದ ನಮ್ಮ ಗುರುಗಳು ಏನು ಮಾಡ್ಯಾರು, ಏನು ಮಾಡಲಿಕ್ಕಿಲ್ಲೆಂದು ಕೆಲವರೂ, ಭಯಂಕರವಾದ ಬ್ರಹ್ಮಹತ್ಯಾದೋಷವು ಬರಿವ್ಯೆಯಿಂದ ದೇವರೆದುರಿಗೆ ಕುಳಿತರೆ ಹೋಗಬಹುದೆ! ಎಂದು ಮತ್ತೆ ಹಲವರೂ, ಇನ್ನೂ ಅನೇಕರು ಅನೇಕ ತೆರನಾಗಿಯೂ ತರ್ಕತಾಂಡವ ಮಾಡುತ್ತ ಗುಜುಗುಜು ಮಾತಾಡಿಕೊಳ್ಳಹತ್ತಿದರು. 'ಲೋಕೋಭಿನ್ನರುಚಿಃ' ಎಂಬಂತೆ ಎಂತಹ ನಿರ್ಮಲ ವಸ್ತುವಿನಲ್ಲಾದರೂ ಹಲವರು ಹಲವು ವಿಧವಾಗಿ ಊಹಿಸುವದು ಲೋಕದ ಸ್ವಭಾವವಾಗಿರುವದು. ಹಿಂದಕ್ಕೆ ಪ್ರತ್ಯಕ್ಷ ಪರಮಾತ್ಮನೇ ಶ್ರೀಕೃಷ್ಣರೂಪದಿಂದ ಅವತರಿಸಿರಲು, ಕೌರವಾದಿಗಳು ಇವನೊಬ್ಬ ಸಾಮಾನ್ಯಗೊಲ್ಲನೆಂದೇ ಭಾವಿಸಲಿಲ್ಲವೇ! ರಾವಣಾಸುರನು ಪ್ರಭುರಾಮಚಂದ್ರನನ್ನು ನರಮನುಷ್ಯನೆಂದೇ ಬಗೆಯಲಿಲ್ಲವೇ? ಇದೂಹಾಗೆಯೇ. ಶ್ರೀಪಾದರಾಯರಿಗೆ ಈ ಗುಜುಗುಜು ಮಾತಾಡಿಕೊಳ್ಳುವದು ಗೊತ್ತಾಯಿ

ತಾದರೂ ಅವರು ಏನೊಂದೂ ಮಾತಾಡಲಿಲ್ಲ ಸ್ಥಿರಚಿತ್ತರಾಗಿಯೇ ಇದ್ದು ಬಿಟ್ಟರು. ಚಂಚಲಚಿತ್ತರಾದ ನಮ್ಮಂಥ ಸಂಸಾರಿಕರ ಸ್ಥಿತಿಯು ಅವರಿಗೆ ಪೂರಾ ಗೊತ್ತು. ಅಂದಮೇಲೆ ಯಾತಕ್ಕೆ ಮಾತಾಡಿಯಾರು?

ಆಯಿತು ಮರುದಿವಸ ಶ್ರೀಪಾದರಾಯರು ದೇವತಾರ್ಚನೆಗೆ ಕುಳಿತರು. ಬ್ರಾಹ್ಮಣನು ಎಲ್ಲರಿಗಿಂತಲೂ ಮುಂದೆ ಬಂದು ಕುಳಿತನು. ಅವನ ಮನಸ್ಸೆಲ್ಲ ಶ್ರೀ ಬಾಲಗೋಪಾಲ ಕೃಷ್ಣನಲ್ಲಿ ಲೀನವಾಗಿ ಹೋಯಿತು. ಮೊದಲೇ ಪಶ್ಚಾತ್ತಾಪದಿಂದ ದಗ್ಧನಾಗಿದ್ದನು. ಗುರುಗಳು ಪೂಜೆಯೆಲ್ಲ ಮುಗಿದ ಬಳಿಕ ಬ್ರಾಹ್ಮಣನ ಮೇಲೆ ಶಂಖೋದಕವನ್ನು ಪ್ರೋಕ್ಷಿಸಿದರು. ಇದೇ ರೀತಿ ಮೂರು ದಿವಸ ನಡೆಯಿತು. ನಾಲ್ಕನೆಯ ದಿವಸ ನೀನು ಬ್ರಹ್ಮಹತ್ಯೆಯಿಂದ ದೂರಾದಿ ನಡೆಯೆಂದು ಹೇಳಿದರು. ಬ್ರಾಹ್ಮಣನು ಸಂತೋಷಸಾಗರದಲ್ಲಿ ಮುಳುಗಿ ಹೋದನೆಂದು ಬೇರೆ ಹೇಳಬೇಕೇ? ಅವನ ಸಂತೋಷವು ಉಕ್ಕಿ ಉಕ್ಕಿ ಕೋಡಿ ಹರಿಯಹತ್ತಿತು. ಆನಂದಾಶ್ರುಗಳಿಂದ ಗುರುಚರಣವನ್ನು ತೊಳೆದು:—ಮಹಾ ಸ್ವಾಮಿಾ! ಗುರುವರ್ಯಾ! ನಾನಿನ್ನು ತಮ್ಮ ಪಾದಸೇವೆಯನ್ನು ಬಿಟ್ಟು ಹೋಗಲಾರೆ-ಹೋಗಲಾರೆ ನನ್ನನ್ನು ಇಲ್ಲಿಯೇ ಇಟ್ಟುಕೊಳ್ಳಬೇಕೆಂದು ದೈನ್ಯದಿಂದ ಬೇಡಿಕೊಳ್ಳಹತ್ತಿದನು. ರಾಜರು: -ತಥಾಸ್ತು! ಅಂದರು.

ಇದನ್ನೆಲ್ಲ ಕಣ್ಣಾರೆ ಕಂಡ ಮಠೀಯ ಪಂಡಿತರು ಮೊದಲಾದವರಿಗೆಲ್ಲ ಇದು ಸರಿಬರಲಿಲ್ಲ. ಏನಿದು? ಶಂಖೋದಕವನ್ನು ಪ್ರೋಕ್ಷಿಸಿದ ಮಾತ್ರಕ್ಕೆ ಬ್ರಹ್ಮಹತ್ಯಾದೋಷವು ಹೋಗಬಹುದೇ? ಹಾಗಾದ ಪಕ್ಷದಲ್ಲಿ ಭಾಗೀರಥಿಯೊಳಗೆ ಸ್ನಾನ ಮಾಡಿದ ಕತ್ತೆಯು ಕುದುರೆಯಾಕಾಗಬಾರದು? ಚಾಂಡಾಲನು ಬ್ರಾಹ್ಮಣನೇಕಾಗಬಾರದು? ಇದರಿಂದ ಶ್ವಪಚರಾದವರಿಗೆ ಮತ್ತಿಷ್ಟು ಉತ್ತೇಜನ ಕೊಟ್ಟಂತೆ ಮಾತ್ರವೇ ಆಗುವದಲ್ಲದೆ, ಅವರು ಎಂದಿಗೂ ಶುದ್ಧವಾಗಲಾರರು. ಮುಷ್ಟಿಯಲ್ಲಿ ಕೆಸರನ್ನು ಹಿಡಿದುಕೊಂಡು ಮೇಲೆ ತೊಳಕೊಂಡರೆ ಅದು ಶುದ್ಧವಾಗುವದೇ? ಹಾಗೇನೇ ಒಳಗೆ ಘೋರವಾದ ಪಾಪವನ್ನಿಟ್ಟುಕೊಂಡು ಮೇಲೆ ಶಂಖೋದಕವನ್ನು ಹಾಕಿಕೊಂಡರೆ ತಾನೇ ಏನಾದೀತು? ಇತ್ಯಾದಿ ತರ್ಕ-ವಿತರ್ಕಗಳನ್ನು ಮಾಡುತ್ತ ತಮ್ಮ ಸಿದ್ಧಾಂತವನ್ನೇ ಸ್ಥಾಪಿಸಿದರು. 'ಹನುಮಂತನ ಮುಂದೆ ಹಾರ ಗುಬ್ಬಿ' ಎಂದಂತೆ ಶ್ರೀಪಾದರಾಯರಂಥ ಮಹಾನುಭಾವರೆದುರಿಗೆ ತಾವು ಯಾವ

ಗಿಡದ ತೊಪ್ಪಲೆಂಬದನ್ನು ಅವರು ಆಳವಾಗಿ ಯೋಚಿಸಲಿಲ್ಲ. ಪಾಂಡಿತ್ಯದ ಮದದಲ್ಲಿ ಸತ್ಪುರುಷರು ಅವರ ಕಣ್ಣಿಗೇ ಕಾಣಿಸದೆ ಹೋದರು. ಸಿರಿ ಬಂದವರಿಗೆ ಪರಿ ಬರುವದು ಸಹಜ.

ಈ ಸುದ್ದಿಯು ನಾಕೇಳು ನೀಕೇಳೆಂದು ಶ್ರೀಪಾದರಾಯರ ಕಿವಿಯವರೆಗೂ ಬಂದು ಮುಟ್ಟಿತು. ಮೂರು ಕಿವಿಗೆ ಮುಟ್ಟಿದ್ದು ಮೂಲೋಕಕ್ಕೆ ಮುಟ್ಟುವದೆಂಬ ಸಾಮತಿಯು ಸುಳ್ಳಲ್ಲ. ಆದರೇನು? ಅವರು ಪಂಡಿತರ ಆಲೋಚನೆಗೆ ನಕ್ಕುಬಿಟ್ಟರು. ಆಗಲಿ, ಅಕ್ಕಸಾಲಿಗರಿಂದಲೇ ಕಿವಿ ಚುಚ್ಚಿಸಿದರೆ ಕಿವಿಯು ನೋಯುವದಿಲ್ಲವೆಂಬಂತೆ ಇವರಿಗೆ ತಕ್ಕ ದೃಷ್ಟಾಂತವನ್ನೇ ತೋರಿಸೋಣವೆಂದು ಸುಮ್ಮನಿದ್ದರು. ಮುಂದೆ ನಾಲ್ಕಾರು ದಿನದ ಮೇಲೆ ಅಂತ್ಯಂತ ಶುಭ್ರವಾದ ಎರಡು ವಸ್ತ್ರಗಳನ್ನು ತರಿಸಿ ಅದೇ ಪಂಡಿತರ ಕೈಯಲ್ಲಿ ಕೊಟ್ಟು, ಕೇರೆಣ್ಣೆಯಲ್ಲಿ ತೋಯಿಸಲಿಕ್ಕೆ ಹೇಳಿದರು. ಪಂಡಿತರಿಗೆ ಇದರ ಮರ್ಮವು ಗೊತ್ತಾಗಲಿಲ್ಲ. ಇದೊಂದು ಸಾಮಾನ್ಯ ಸಂಗತಿಯಾಗಿರಬಹುದೆಂದೇ ಅವರು ಭಾವಿಸಿದರು. ವಸ್ತ್ರಗಳನ್ನು ಕೇರೆಣ್ಣೆಯಲ್ಲಿ ಎದ್ದಿದ ಮೇಲೆ ಕೇಳುವದೇನು? ಕಪ್ಪು ಬಡೆದು ಹೋದವು. ಅದರಲ್ಲಿ ಒಂದನ್ನು ಪಂಡಿತರ ಹತ್ತರ ಭದ್ರವಾಗಿಡಿಸಿ, ಇನ್ನೊಂದನ್ನು ದೇವತಾರ್ಚನೆಯ ಕಾಲಕ್ಕೆ ಅವರಿಗೇ ತರಲಿಕ್ಕೆ ಹೇಳಿದರು. ಶ್ರೀಪಾದರಾಯರು ಮತ್ತೇನನ್ನೂ ಮಾಡಲಿಲ್ಲ. ಹಿಂದಕ್ಕೆ ಬ್ರಾಹ್ಮಣನಿಗೆ ಶಂಖೋದಕವನ್ನು ಪ್ರೋಕ್ಷಿಸಿದಂತೆ, ಈಗ ಆ ಕಪ್ಪು ವಸ್ತ್ರಕ್ಕೂ ಪ್ರೋಕ್ಷಿಸಿದರು. ಆಯಿತು ಹೀಗೆಯೇ ಮೂರು ನಾಲ್ಕು ದಿವಸ ನಡೆದು ಹೋಯಿತು. ಆಹಹಾ! ಅದೇನು ಶಂಖೋದಕದ ಸಾಮರ್ಥ್ಯವೋ, ಶ್ರೀಪಾದರಾಯರ ಮಹಿಮೆಯೋ ಏನೆಂದು ಹೇಳೋಣ! ಅಂತಹ ಮಲಿನವಾದ ಕಪ್ಪುವರ್ಣದ ವಸ್ತ್ರವೂ ಕೂಡ ಮೊದಲಿನಂತೆ ಶುಭ್ರವಾಗಿ ಹೋಯಿತು. ಒಂದು ಕಪ್ಪು ಕಲೆಯು ಕೂಡಾ ಅದರಲ್ಲುಳಿಯಲಿಲ್ಲ; ವಸ್ತ್ರದ ಕಪ್ಪೆಲ್ಲ ಪಂಡಿತರ ಮೋರೆಯ ಮೇಲೆ ಕುಂತಂತಾಯಿತು ಅವರು ಝುರ್ರನೆ ಇಳಿದು ಹೋದರು ಮೋರೆ ಇಷ್ಟಾಯಿತು. ಗುರುಗಳಿಗೆ ಶರಣಾಗತರಾಗಿ ಬೇಡಿಕೊಂಡರು.

ಭೋ ಸ್ವಾಮಿ! ಗುರುವರ್ಯಾ! ನಿನ್ನ ಅಗಾಧವಾದ ಮಹಿಮೆಯನ್ನು ಪಾಮರರಾದ ನಾವು ಬಾಯಿಂದ ಬಣ್ಣಿಸಲಿಕ್ಕೂ ಸಮರ್ಥರಲ್ಲ.

ಇಂಥಾ ಅಲ್ಪಜ್ಞರೂ ಅಲ್ಪ ಶಕ್ತಿಯುಳ್ಳವರೂ, ನಿನ್ನನ್ನು ಅಡಿಕೊಳ್ಳುವದೆಂದರೆ, ಕುಹಕನು ಸೂರ್ಯನ ಮೇಲೆ ಮಣ್ಣು ತೂರಿ ತನ್ನ ಕಣ್ಣಲ್ಲಿ ಕೆಡವಿಕೊಂಡಂತೆಯೇ ಸರಿ ನಮ್ಮಿಂದ ಸರ್ವಾಪರಾಧವಾಯಿತು. ತಮ್ಮಂಥ ಮಹಾನುಭಾವರನ್ನು ಕಾಣಲಿಲ್ಲ ಪಾಂಡಿತ್ಯವು ಎಷ್ಟಿದ್ದರೇನು? ಅದು ಭಗವದ್ಭಕ್ತಿಗೆ ಕಾರಣವಾಗಲಾರದು. 'ಭಕ್ತಿಯಿಲ್ಲದ ಹೃದಯವು ಒಡಕು ಮಡಿಕೆಗೆ ಸಮಾನವಾದದ್ದು.'

ಹೀಗೆಂದು ಬಿದ್ದು ಬೇಡಿಕೊಳ್ಳುತ್ತಿರುವ ಪಂಡಿತರನ್ನುದ್ದೇಶಿಸಿ, ಶ್ರೀಪಾದರಾಯರು:—ಎಲೈ ಪಂಡಿತರುಗಳಿರಾ! ಇದರಲ್ಲಿ ನಮ್ಮ ಮಹತ್ವವೇನೂ ಇರುವದಿಲ್ಲ ಎಲ್ಲವೂ ಭಗವಂತನ ಲೀಲೆ. ಭಗವಂತನ ಇಚ್ಛೆ. 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ।' ಎಂಬಂತೆ ಕೇವಲ ಇಚ್ಛಾಮಾತ್ರದಿಂದಲೇ ಜಗತ್ತನ್ನು ಸೃಷ್ಟಿಸುವ ಭಗವಂತನೇ ಸರ್ವರ ಹೃದಯದಲ್ಲಿಯೂ ನಿಂತು, ಒಬ್ಬೊಬ್ಬರಿಂದ ಒಂದೊಂದು ಕಾರ್ಯವನ್ನು ಮಾಡಿಸುತ್ತಿರುವನು; ಆದರೆ ಇಷ್ಟು ಮಾತ್ರ ನಿಜ ಪರಮಾತ್ಮನು ತನ್ನ ಭಕ್ತರ ವಶನಾಗುವನೇ ಹೊರ್ತು ಅನ್ಯಥಾ ಇಲ್ಲ. ಇದೊಂದನ್ನು ಚನ್ನಾಗಿ ನೆನಪಿನಲ್ಲಿಡಿರಿ. ಎಂಬದಾಗಿ ಉಪದೇಶಿಸಿ ಅವರನ್ನು ಸಮಾಧಾನ ಪಡಿಸಿದನು

ಇದೇ ಮಾತನ್ನೇ ಶ್ರೀ ನಿಧಿತೀರ್ಥರು ತಮ್ಮ ಶ್ರೀ ಪಾದರಾಜಾಷ್ಟಕದಲ್ಲಿ ಹೇಳಿಕೊಂಡದ್ದು ಹೇಗೆಂದರೆ—

"ಶಂಖಸ್ಥಿತೇನ ಪಯಸಾ ದ್ವಿಜಘಾತ ಪಾಪೆ ದೂರೀ ಕೃತೇ
ಬಹುಜನೇಷು ವಿಶಂಕಿತೇಷು ॥
ತೇನೈವ ಶುದ್ಧಾವಿಲಸಾತಿಪಟಚ್ಛರಾಯ ಶ್ರೀಪಾದರಾಜ
ಗುರುವೇಸ್ತು ನಮಃಶುಭಾಯ ॥"

ಅಲ್ಲದೆ ಇವರ ಸಾಕ್ಷಾತ್ ಶಿಷ್ಯರೇ ಆದ ಶ್ರೀ ವ್ಯಾಸರಾಯರು ತಮ್ಮದೊಂದು ಪದ್ಯದಲ್ಲಿ ಇವರನ್ನು ಹೀಗೆ ಹೊಗಳಿರುವರು.

ರಾಗ।

ವಿಪ್ರಗೆ ಹತ್ಯಾ ದೋಷಬರಲು। ಕ್ಷಿಪ್ರಶಂಖೋದಕದಲಿಳಿಯೆ ॥
ಅಪ್ರಬುದ್ಧರು ದೂಷಿಸೆ ಕೇರೆಂಣೆ । ಕಪ್ಪುವಸನ ಶುದ್ಧಿ ಮಾಡಿದ ॥
ಮಹಿಮೆ ಸಾಲದೇ। ಇಷ್ಟೇ। ಮಹಿಮೆ ಸಾಲದೇ॥
ಅಹಿಶಾಯಿ ಒಲಿಮೆಯಿಂದ। ಮಹಿಯೊಳಿನ್ನ ಶ್ರೀಪಾದರಾಯರ ॥ಪಲ್ಲ॥

ಇದೇ ರೀತಿ ಮತ್ತೊಮ್ಮೆ ಶ್ರೀಪಾದರಾಜರು ಸಂಚಾರಕ್ರಮದಿಂದ ವಿಜಯನಗರಕ್ಕೆ ಬಂದಾಗ, ಅಲ್ಲಿಯ ಅರಸನಾದ ವೀರನರಸಿಂಹನು + (೧೫೦೫-೧೫೦೯) ರೋಷಾವೇಶದಿಂದ ಬ್ರಹ್ಮಹತ್ಯಾ ಮಾಡಿ ಅನಂತರ ಪಶ್ಚಾತ್ತಾಪಪಡುತ್ತ ಪ್ರಾಯಶ್ಚಿತ್ತ ಮಾಡಿಸಿಕೊಳ್ಳಬೇಕೆಂದು ಸರಿಯಾದ ಗುರುಗಳನ್ನು ಹುಡುಕುತ್ತಿದ್ದನು. ಅಷ್ಟರಲ್ಲಿ ಮಹಾನುಭಾವರಾದ ಶ್ರೀಪಾದರಾಯರು ಬಂದಿರುವರೆಂಬ ಸುದ್ದಿಯು ಹತ್ತಿತು ಕೂಡಲೆ ರಾಜನು ತನ್ನ ಸಕಲರಾಜವೈಭವದೊಂದಿಗೆ ಹೋಗಿ, ಶ್ರೀಗಳವರನ್ನು ಪಲ್ಲಕ್ಕಿಯಲ್ಲಿ ಕೂಡ್ರಿಸಿಕೊಂಡು ಮೆರವಣಿಗೆಯಿಂದ ಕರೆತಂದು, ತನಗೊದಗಿದ ಸಂಕಟವನ್ನೆಲ್ಲ ನಿವೇದನ ಮಾಡಿ, ಕೆಲವು ಕಾಲ ಸಿಂಹಾಸನಾರೂಢರಾಗಬೇಕೆಂದು ಪ್ರಾರ್ಥಿಸಹತ್ತಿದನು ಶ್ರೀಪಾದರಾಯರು ಜ್ಞಾನದೃಷ್ಟಿಯಿಂದ ನೋಡಿ, ಭಗವಂತನಾದ ಸ್ವಾಮಿಯ ಇಚ್ಛೆಯೇ ಹೀಗಿರುವದೆಂಬುದನ್ನರಿತು, ಅದ ಕ್ಕೊಪ್ಪಿಕೊಂಡು ತುಸ ದಿವಸ ಸಿಂಹಾಸನಾಧಿಷ್ಠಿತರಾಗಿ ರಾಜ್ಯಭಾರ ಮಾಡಿದರು (ಆಗ ರಾಜಪೋಷಾಕು ಮಾತ್ರ ಹಾಕಿಕೊಳ್ಳುತ್ತಿದ್ದರೇ ಹೊರತು ಇತರ ಯಾವ ರಾಜ ಮರ್ಯಾದೆಗಳನ್ನೂ ಉಪಯೋಗಿಸುತ್ತಿರಲಿಲ್ಲ)

+ ವಿಜಯನಗರದ ಮೊದಲನೇ ವಂಶದಲ್ಲಿ, ಹರಿಹರ, ಬುಕ್ಕ, ಎರಡನೇ ಹರಿಹರ, ಎರಡನೇ ಬುಕ್ಕ, ೧ನೇ ದೇವರಾಯ, ವೀರವಿಜಯ, ೨ನೇ ದೇವರಾಯ, ಮಲ್ಲಿಕಾರ್ಜುನ, ವಿರೂಪಾಕ್ಷರಾಯ ಎಂಬವರು ಆಗಿಹೋದರು. ಈ ವಿರೂಪಾಕ್ಷರಾಯನನ್ನು ಆತನ ದಂಡನಾಯಕನಾದ ಸಾಳುವ ನರಸಿಂಹರೆಂಬವನು ಸನ್ ೧೪೮೭ರಲ್ಲಿ ಕೊಂದು ತಾನು ಸಿಂಹಾಸನಾರೂಢನಾದನು ಇಲ್ಲಿಂದ ಎರಡನೇ ವಂಶವು ಆರಂಭವಾಯಿತು.

ಈ ಸಾಳುವ ನರಸಿಂಹನ ಅಣ್ಣನ ಮೊಮ್ಮಗನೂ, ಸೇನಾಪತಿಯೂ ಆಗಿದ್ದ ತುಳುವ ನರಸರಾಜನೆಂಬವನಿಗೆ ತಿಪ್ಪಾಂಬಿಕೆ, ನಾಗಲಾಂಬಿಕೆ, ಓಬಾಂಬಿಕೆಯರೆಂಬ ಮೂರು ಜನ ಹೆಂಡಂದಿರಿದ್ದರು. ಇವರಲ್ಲಿ ತಿಪ್ಪಾಂಬಿಕೆಯ ಹೊಟ್ಟೆಯೊಳಗೆ ವೀರನರಸಿಂಹರಾಯನೂ, ನಾಗಲಾಂಬಿಕೆಯ ಉದರದಲ್ಲಿ ಕೃಷ್ಣರಾಯನೂ, ಓಬಾಂಬಿಕೆಯಲ್ಲಿ ಅಚ್ಯುತರಾಯನೂ ಜನಿಸಿದರು. ವೀರನರಸಿಂಹನು ಪಟ್ಟಕ್ಕೆ ಬಂದು ಅಲ್ಪಕಾಲದಲ್ಲಿಯೇ ಕಾಲಗತಿಯನ್ನು ಹೊಂದಿದನು. ನಂತರ ಕೃಷ್ಣರಾಯನು ಪಟ್ಟಕ್ಕೆ ಬಂದನು (೧೫೦೯-೧೫೩೦). ಇವನ ತರುವಾಯ ಅಚ್ಯುತರಾಯನು ೧೨ ವರ್ಷ ಆಳಿದನು.

ಹಾಗೂ ರಾಜನಿಗೆ ಪ್ರಾಯಶ್ಚಿತ್ತವನ್ನು ಮಾಡಿಸಿ ಬ್ರಹ್ಮಹತ್ಯಾದೋಷ ವನ್ನು ಕಳೆದರು. ಇದರಿಂದ ರಾಜನು ಬಹು ಸಂತುಷ್ಟನಾಗಿ ಇವರಿಗೆ ಅಪೂರ್ವವಾದ ಸಂಭಾವನೆ ಕೊಟ್ಟು ಸತ್ಕರಿಸಿದನು.

ಈ ಮಾತನ್ನು ನಿಧಿತೀರ್ಥರು—

"ಶ್ರೀಮದ್ವೀರನೃಸಿಂಹರಾಜ ನೃಪತೇರ್ಭೂದೇವಹತ್ಯಾ ವ್ಯಥಾಂ ।
ದೂರೀ ಕೃತ್ಯ ತದರ್ಪಿತೋಜ್ವಲ ಮಹಾ ಸಿಂಹಾಸನೇ ಸಂಸ್ಥಿತಃ॥
ಶ್ರೀಮತ್ಪೂರ್ವಕವಾಟನಾಮಕ ಪುರೇ ಸರ್ವೇಷ್ಟ ಸಿದ್ಧಿಪ್ರದಃ।
ಶ್ರೀ ಶ್ರೀಪಾದಯತೀಂದ್ರ ಶೇಖರಮಣಿರ್ಭೂಯಾತ್ಸನಃಶ್ರೇಯಸೇ॥"
(ಶ್ರೀಪಾದರಾಜಾಷ್ಟಕ)

ಹೀಗೆ ಬಣ್ಣಿಸಿರುತ್ತಾರೆ.

ಭಕ್ತರೆಂದರೆ, ಭಗವಂತನಿಗೆ ಜೀವಪ್ರಾಣ. ಅವರು ಕೇಳಿದ್ದನ್ನು ಕೊಡುವನು; ಹೇಳಿದ್ದನ್ನು ಮಾಡುವನು (ಅಂತೆಯೇ ಅಂಬರೀಷನಿಗೆ ತನ್ನ ಕೈಯೊಳಗಿನ ಚಕ್ರವನ್ನೇ ಕೊಟ್ಟನು.) ಧರ್ಮರಾಜನ ಮನೆ ಯಲ್ಲಿ ಎಂಜಲನ್ನು ಸಹ ಬಳಿದನು. ಆದ್ದರಿಂದೇನೇ ಶ್ರೀಜಗನ್ನಾಥದಾಸ ರಾಯರು ಹೀಗೆ ಅಂದಿರುವರು:—

"ಅಚ್ಯುತನೆ ನಿನ್ನಂಥ। ಹುಚ್ಚು ಧೊರೆಯು ಕಾಣೆ । ಕಚ್ಚಿ ಬೈದೊದ್ದ ಭಕತರಾ॥ ಭಕತರಾ ॥ ಅಪರಾಧವನು ಸಚ್ಚಿದಾನಂದ ಎಣಿಸಿದ್ಯಾ॥"

ಇನ್ನೊಬ್ಬ ಆನಂದದಾಸರೆಂಬವರು ಹೀಗೆ ಅಂದಿರುವರು:—

"ಇಂದಿರಾಪತಿ ಅವರ ಮುಂದೆ ಕುಣಿವನೊ ।
ಅಂದ ವಚನವ ನಿಜಕೆ ತಂದು ಕೊಡುವನೊ ॥"

---

## ೪ ಗೋಪಾಲಕೃಷ್ಣಪ್ರತಿಮಾ ಲಾಭ.

ಶ್ರೀಪಾದರಾಯರು ಶಿಷ್ಯರಾದ ವ್ಯಾಸರಾಯರಿಗೆ ಅಖಂಡ ಹನ್ನೆ ರಡು ವರ್ಷ ವಿದ್ಯಾಭ್ಯಾಸ ಮಾಡಿಸಿ, ಘನಪಂಡಿತರನ್ನಾಗಿ ಮಾಡಿಬಿಟ್ಟರು. ಆಗ ವ್ಯಾಸರಾಯರು ಶ್ರೀಪಾದರಾಯರನ್ನು ಕರಕೊಂಡು, ಮೂಲಗುರಗೆ ಳಾದ ಬ್ರಹ್ಮಣ್ಯತೀರ್ಥರಿರುವ ಪ್ರವಸ್ಯಪಲ್ಲಿ ಎಂಬಲ್ಲಿಗೆ ಬಂದು, ಅಲ್ಲಿ ಹಿಂದು

ಪ್ರಾಣದೇವರನ್ನು ಪ್ರತಿಷ್ಠಾಪನೆ ಮಾಡಿ + ಆ ಕ್ಷೇತ್ರಕ್ಕೆ ತಮ್ಮ ಗುರುಗಳ ಹೆಸರನ್ನೇ ಎಂದರೆ ಬ್ರಹ್ಮಣ್ಯಪುರವೆಂದೇ ಹೆಸರಿಟ್ಟರು. ಇಷ್ಟರಲ್ಲಿ ಪಂಢರಾಪುರಕ್ಕೆ ಬರಬೇಕೆಂದು ಸ್ವಪ್ನವಾಯಿತು. ವ್ಯಾಸರಾಯರ ಸಂತೋಷವನ್ನು ಹೇಳತೀರದು. ಇಬ್ಬರು ಗುರುಗಳನ್ನೂ ಸಂಗಡ ಕರಕೊಂಡೇ ಪಂಢರಾಪುರಕ್ಕೆ ಪ್ರಯಾಣ ಮಾಡಿದರು. ನಾದಬ್ರಹ್ಮನೆನಿಸಿದ ಶ್ರೀ ವಿಠ್ಠಲನ ದರ್ಶನವಾಯಿತು. ಅಲ್ಲಿಯೇ ಕೆಲವು ದಿವಸ ನಿಂತರು. ಒಂದಾನೊಂದು ದಿನ ಬೆಳಗುಮುಂಜಾನೆ ಶ್ರೀಪಾದರಾಯರ ಸ್ವಪ್ನದಲ್ಲಿ ಪರಮಾತ್ಮನು ಬಂದು, "ಭೀಮರಥೀ-ಪುಷ್ಪವತೀ ನದಿಗಳ ಸಂಗಮ ಸ್ಥಳದಲ್ಲಿರುವ ವಿಷ್ಣುಪಾದದ ಹತ್ತರ ಶ್ರೀವೇಣುಗೋಪಾಲಕೃಷ್ಣದೇವರ ಪ್ರತಿಮೆಯುಳ್ಳ ಪೆಟ್ಟಿಗೆಯೊಂದು, ಪಾಂಡವರ ವಂಶದ ಕಡೆಯ ಅರಸನಾದ ಕ್ಷೇಮಕರಾಜನಿಂದ ನೆಲದಲ್ಲಿ ಹೂಳಲ್ಪಟ್ಟಿರುವದು. ಅದನ್ನು ತೆಗೆದುಕೊಂಡು ನೀವು ಪೂಜಾ ಮಾಡಬೇಕೆ"ಂದು ಹೇಳಿದ ಹಾಗೆ ಬೋಧೆಯಾಯಿತು. ಕೂಡಲೆ ಸ್ವಪ್ನವೃತ್ತಾಂತವನ್ನು ಎಲ್ಲರಿಗೂ ತಿಳಿಸಿದರು. ಆಗ ಎಲ್ಲರೂ ಕೂಡಿ ನಿರ್ದೇಶಿಸಲ್ಪಟ್ಟ ಸ್ಥಳಕ್ಕೆ ಹೋಗಿ, ಅಲ್ಲಿ ಅಗಿದು ನೋಡಲು ಸ್ವಪ್ನದಲ್ಲಿ ಹೇಳಿದ ಪ್ರಕಾರ ಪೆಟ್ಟಿಗೆಯೊಂದು ದೊರೆಯಿತು. ಈ ವಾರ್ತೆಯನ್ನು ಶ್ರೀ ನಿಧಿತೀರ್ಥರು ತಮ್ಮ ಶ್ರೀಪಾದರಾಜಾಷ್ಟಕದಲ್ಲಿ ಹೀಗೆ ಬಣ್ಣಿಸಿರುತ್ತಾರೆ.

"ಶ್ರೀಮತ್ಯಾ ಜಾಂಬುವತ್ಯಾ ಯದುಪತಿನಗರೇ ಪೂಜಿತಃ ಫಲ್ಗುನೇನ |
ಪ್ರಾಪ್ತಸ್ತೇನಾರ್ಚಿತಾಂಘ್ರಿಸ್ಸಕಲಸುಖಕರೆ ಪಾಂಡುರಂಗೆ ತರಂಗೆ ||

---

+ ಶ್ರೀವ್ಯಾಸರಾಯರು ಘನಶೈಲಪುರಿ ಅಥವಾ ಪೆನಗೊಂಡೆ ಎಂಬಲ್ಲಿ ಒಂದು ವರ್ಷ ನಿಂತು ದಿನಕ್ಕೊಂದರಂತೆ (ಮುನ್ನೂರಾ ಅರವತ್ತೊಂದು ಕೆಲವರು ಹೇಳುವರು) ಏಳುನೂರಾ ಮೂವತ್ತು ೭೩೦ ಪ್ರಾಣದೇವರನ್ನು ಪ್ರತಿಷ್ಠಿಸಿದರೆಂತಲೂ, ಅವೆಲ್ಲವುಗಳಲ್ಲಿ ಇದೇ ಮೊದಲನೆಯದೆಂತಲೂ ಇವರ ಒಂದು ಪುರಾತನ ಸ್ತೋತ್ರದಿಂದ ಗೊತ್ತಾಗುವದು.

ಮೂವರು ಯತಿಗಳೂ ಇಲ್ಲಿ ಕೂಡಿದ ಸ್ಮರಣಾರ್ಥವಾಗಿ ಇದನ್ನು ಸ್ಥಾಪಿಸಿದರಂತೆ

ಇದೇ ಧಾರವಾಡ ಜಿಲ್ಹೆಯ ಕೋಡ ತಾಲೂಕ ಸಾತೇನಹಳ್ಳಿಯ ಪ್ರಾಣದೇವರನ್ನು ಸ್ಥಾಪಿಸಿದವರು ಇದೇ ಬ್ರಹ್ಮಣ್ಯತೀರ್ಥರು. ವ್ಯಾಸರಾಯರುಗಳು.

ಭೂವೌಕ್ಷೇತ್ರೇಽಥ ಪ್ರಷ್ಟಃ ಸಕಲ ಬಂಧಗುರೋರ್ಯಸ್ಯಲಬ್ಧೋವ
ತಾನ್ಯಾಂ |

ಸ್ವಪ್ನೇ ಶ್ರೀವಾಸಂರಮೇಶಃ ಪ್ರಭುವರತನಯಾಸತ್ಯಭಾಮಾಸಮೇತಃ||"

ಶ್ರೀಪಾದರಾಯರು ಸಂತೋಷಾತಿಶಯದಿಂದ ಪೆಟ್ಟಿಗೆಯನ್ನು ತಲೆಯ ಮೇಲೆ ಹೊತ್ತುಕೊಂಡು ಒಂದು ನೋಡುತ್ತಾರೆ, ಒಂದು ಪೆಟ್ಟಿಗೆಯಲ್ಲಿ ಜಾಂಬುವತೀ ಅರ್ಜುನಾರ್ಚಿತ ರುಕ್ಮಿಣೀ ಸತ್ಯಭಾಮಾ ಸಮೇತ ಶ್ರೀರಂಗ ವಿಠ್ಠಲ ಮೂರ್ತಿಯಿತ್ತು. ಇನ್ನೊಂದನ್ನು ತೆಗೆಯಲಿಕ್ಕೆ ಹೋದರು. ಏನು ಮಾಡಿದರೂ ಅದರ ಮುಚ್ಚಳವೇ ಬರಲಿಲ್ಲ. ಪೆಟ್ಟಿಗೆಯ ಬಾಯಿ ತೆರೆಯಲಿಲ್ಲ. ಆಗ ಶ್ರೀ ಪಾದರಾಯರು ಅದೊಂದೇ ಮೂರ್ತಿಯನ್ನೇ ತಕ್ಕೊಂಡು ಪೂಜಿಸಿ, ಇನ್ನೊಂದು ಪೆಟ್ಟಿಗೆಗೆ ಹಾಗೇ ಮಂಗಳಾರತಿ ಮಾಡಿ ಬಿಟ್ಟರು.

ಎಷ್ಟೋ ದಿವಸ ಹೀಗೆಯೇ ನಡೆಯಿತು. ಮುಂದೆ ಸಂಚಾರ ಮಾಡುತ್ತ ಮಾಡುತ್ತ ಅನೇಕ ತೀರ್ಥ-ಕ್ಷೇತ್ರಗಳನ್ನು ಸಂದರ್ಶಿಸಿಕೊಂಡು ಪುನಃ ಮೂವರು ಯತಿಗಳೂ ಮುಳಬಾಗಿಲಿಗೆ ಬಂದರು. ಒಂದಾನೊಂದು ದಿವಸ ಶ್ರೀಪಾದರಾಯರು-ಯಾವಾಗಲೂ ಸುಖಪ್ರಾರಬ್ಧವನ್ನೇ ಭೋಗಿಸ ತಕ್ಕವರಾದ್ದರಿಂದ, ಸುಗಂಧತೈಲಗತಳನ್ನು ಹಚ್ಚಿಕೊಂಡು ಅಭ್ಯಂಗನ ಮಾಡಿ ಕೊಳ್ಳುವದರಲ್ಲಿ ತೊಡಗಿ, ಶಿಷ್ಯರಾದ ವ್ಯಾಸರಾಯರಿಗೇನೇ ಸಂಸ್ಥಾನದ ಪೂಜಾ ಮಾಡುವಂತೆ ಅಪ್ಪಣೆ ಮಾಡಿದರು ಆಗ ವ್ಯಾಸರಾಯರು ಸಂಸ್ಥಾನದ ಪೂಜೆಗೆ ಕುಳಿತುಕೊಂಡು ಎಲ್ಲ ಪ್ರತಿಮಾಗಳ ಸಂಗಡ ಭೀಮ ರಥೀ ತೀರದಲ್ಲಿ ಸಿಕ್ಕ ಪೆಟ್ಟಿಗೆಯ ಮುಚ್ಚಳವನ್ನೂ ತೆಗೆಯಲಿಕ್ಕೆ ಹೋದರು. ಅದು ಸಹಜವಾಗಿ ಬಂತು. ಇಷ್ಟೇ ಅಲ್ಲ. ಅದರೊಳಗಿದ್ದ ಶ್ರೀ ವೇಣು ಗೋಪಾಲಮೂರ್ತಿಯು ಕೊಳಲನ್ನೂದುತ್ತ-ನರ್ತನ ಮಾಡುತ್ತ ಪ್ರತ್ಯಕ್ಷ ವಾಗಿಯೇ ಎದ್ದು ಬಂದನು. ಸ್ವಾಮಿಯೇ ಈ ರೀತಿ ಬಂದ ಮೇಲೆ,

ಯಾಂ ಯಾಂ ಪರೇಶ ಉರ್ವಧ್ಯೈವಕರೋತಿ ಲೀಲಾಂ |
ತಾಂ ತಾಂ ಕರೋತ್ಯನು ತಥೈವ ರಮಾಪಿದೇವೀ ||
ನೈತಾವತಾಪಿ ಪರಮಸ್ಯ ತಥಾ ರಮಾಯಾಃ |
ದೋಷೋಣುರಪ್ಯನು ವಿಚಿಂತ್ಯ ಉರುಪ್ರಭೂಯಾತ್ ||
(ಮಹಾಭಾರತ ತಾತ್ಪರ್ಯ ನಿರ್ಣಯ. ೫-೩೫)

ಎಂಬಂತೆರುಕ್ಮಿಣಿ-ಸತ್ಯಭಾಮೆಯರು ಸಹ ತಾವೂ ಹಿಂದಿನಿಂದ ನರ್ತನ ಮಾಡುತ್ತಾ ಬಂದುಬಿಟ್ಟರು ಹಿಂದಕ್ಕೆ ಪ್ರಲ್ಹಾದನಿಗೆ ಒಲಿದ ಸ್ವಾಮಿಯು ಕಂಬದಿಂದಲೇ ಬಂದು ದರ್ಶನ ಕೊಟ್ಟಂತೆ, ಈಗಲಾದರೂ ಅದೇ ಪ್ರಲ್ಹಾದಾಂಶರಾದ ಶ್ರೀವ್ಯಾಸರಾಯರ ಭಕ್ತಿಭಾವಕ್ಕೆ ಒಲಿದು ಸ್ವಾಮಿಯು ದರ್ಶನ ಕೊಟ್ಟನೆಂದು ಹೇಳಬಹುದು ಹೀಗೆ ಅಕಸ್ಮಾತ್ತಾಗಿ ಒದಗಿದ ಅಘಟಿತ ಘಟನಾ ದೃಶ್ಯವನ್ನು ಕಂಡು ವ್ಯಾಸರಾಯರು ಆನಂದಪರವಶರಾಗಿ ಕ್ಷಣಹೊತ್ತು ಮೈಮರೆದು ಕುಳಿತರು. ಸ್ವಾಮಿಯ ನರ್ತನವು ನಡದೇ ಇತ್ತು. ಆಗ ವ್ಯಾಸರಾಯರಿಗಾದ ಸಂತೋಷವನ್ನು ಏನೆಂದು ಹೇಳಲೀ! ಭೋ ಸ್ವಾಮಿ! ಭಗವಂತಾ! ಕೇವಲ ಕ್ಷುದ್ರಾದಪಿ ಕ್ಷುದ್ರನಾದ ನನ್ನ ಮೇಲೆ ಎಂತಹ ಅಪಾರವಾದ ದಯೆಯನ್ನು ತೋರಿದೆಯಲ್ಲಾ! ನನ್ನೀ ಗುರು-ಹಿರಿಯರ ಅನುಗ್ರಹದಿಂದ ಈ ಹೊತ್ತು ಇಂಥಾ ಪರಮಪಾವನಮೂರ್ತಿಯ ಪಾದ ದರ್ಶನವಾಯಿತು. ಧನ್ಯನಾದೆ! ಧನ್ಯನಾದೆ! ಹೀಗೆಂದು ಅನೇಕ ವಿಧದಿಂದ ಸ್ತೋತ್ರ ಮಾಡಿ ನಾಲದುದಕ್ಕೆ ಸಂತೋಷಾತಿಶಯದಲ್ಲಿ ಸಾಲಗ್ರಾಮಗಳನ್ನೇ ತಕ್ಕೊಂಡು ಸ್ವಾಮಿಯ ನರ್ತನಕ್ಕೆ ಸರಿಯಾಗಿ ತಾಳ ಹಾಕುತ್ತ ವೇಣುಗೀತದಿಂದಲೂ, ತಕ್ಷಣ ತಾವೇ ರಚಿಸಿದ ಶ್ರೀಕೃಷ್ಣಮಂಗಳಾಷ್ಟಕದಿಂದಲೂ ಗಾಯನ ಮಾಡಹತ್ತಿದರು. ಮೈಮೇಲೆ ಎಚ್ಚರದಪ್ಪಿಹೋಯಿತು ಎರಡೂ ಕಣ್ಣುಗಳಲ್ಲಿ ಆನಂದಬಾಷ್ಪಗಳು ಧಾರಾಧಾರೆಯಾಗಿ ಸುರಿಯಹತ್ತಿದವು ಆಹಹಾ! ವ್ಯಾಸರಾಯರ ಭಕ್ತಿಯೋಗ ಸಾಮರ್ಥ್ಯವು ಇನ್ನೆಂಥಾದ್ದೋ? ಪರಮಾತ್ಮನು ಅವರಲ್ಲಿ ಇನ್ನೆಷ್ಟು ಕಾರುಣ್ಯವನ್ನಿಟ್ಟಿದ್ದಾನೋ? ಅದನ್ನೆಲ್ಲಾ ಬಣ್ಣಿಸಲು ಪಾಮರರಾದ ನಾವು ಏನು ಸಮರ್ಥರಾದೇವು? ಇರಲಿ.

ಹೀಗೆ ವ್ಯಾಸರಾಯರ ಗಾಯನವೂ-ಸ್ವಾಮಿಯ ನರ್ತನವೂ ಸರಿಯಾಗಿ ನಡೆದಿರಲು ಶಿಷ್ಯರು ಬಂದು ನೋಡಿದರು. ಮೂರಲೋಕ ಪ್ರಭುವಾದ ಸ್ವಾಮಿಯ ದರ್ಶನವು ಅವರಿಗೆಲ್ಲ ಹೇಗಾಗಬೇಕು? ಅವರು ಬರೇ-ವ್ಯಾಸರಾಯರು ಸಾಲಗ್ರಾಮದಿಂದ ತಾಳಹಾಕುತ್ತಾ ಗಾಯನ ಮಾಡುವದನ್ನಷ್ಟು ಕಂಡರು. ಎಷ್ಟು ಹೊತ್ತು ನಿಂತರೂ ಅವರಾಸ್ತೋತ್ರವು ಮುಗಿಯಲಿಲ್ಲ. ಶಿಷ್ಯರನ್ನು ಕಣ್ಣುಬಿಟ್ಟು ನೋಡಲಿಲ್ಲ. ಇದರಿಂದ ಶಿಷ್ಯರು ಗಾಬರಿಯಾಗಿ ಓಡುತ್ತೋಡುತ್ತ ಶ್ರೀಪಾದರಾಯರ ಹತ್ತರ

ಬಂದು—ಸ್ವಾಮಿ! ನಮ್ಮ ಗುರುಗಳಿಗೆ ಹುಚ್ಚು ಹಿಡಿದಂತೆ ತೋರುತ್ತದೆ. ಸಂಸ್ಥಾನದ ಪೂಜೆ ಮಾಡುವದನ್ನು ಬಿಟ್ಟು, ಸಾಲಗ್ರಾಮಗಳನ್ನು ತಕ್ಕೊಂಡು ಅವು ಹಿಡೆಯುವ ಪರಿವೆ ಸಹ ಇಲ್ಲದೆ ತಾಳ ಹಾಕುತ್ತ ಗಾಯನವನ್ನು ಪ್ರಾರಂಭಿಸಿರುವರು. ನಾವು ಎಷ್ಟು ಹೊತ್ತು ನಿಂತರೂ ನಮ್ಮನ್ನು ದೃಷ್ಟಿಸಲೂ ಇಲ್ಲ ಬೇಗನೆ ಬಂದು ನೋಡಬೇಕು. ಹೀಗೆಂದು ಹೇಳಿದ ಶಿಷ್ಯರ ಮಾತನ್ನು ಕೇಳಿ ಅದೇ ಅಭ್ಯಂಗನ ಮಾಡಿಕೊಂಡಿದ್ದ ಶ್ರೀಪಾದರಾಯರು ಹಾಗೆಯೇ ಓಡಿ ಬಂದು ನೋಡುತ್ತಾರೆ ಶ್ರೀವೇಣು ಗೋಪಾಲ ಮೂರ್ತಿಯು ಕೊಳಲು ಊದುತ್ತ ಸಾಕ್ಷಾತ್ತಾಗಿ ನರ್ತನ ಮಾಡುತ್ತಿದ್ದುದು ಅವರ ದೃಷ್ಟಿಗೆ ಬಿತ್ತು. ಹಿಂದೆ ರುಕ್ಮಿಣಿ-ಸತ್ಯಭಾಮೆಯರೂ ನರ್ತನ ಮಾಡುತ್ತಿರುವರು ಎದುರಿಗೆ ವ್ಯಾಸರಾಯರು ಮೈ-ಯ್ಮೇಲೆ ಪರಿವೆ ಇಲ್ಲದೆ ಗಾಯನ ಮಾಡುತ್ತಿರುವರು. ಇದನ್ನೆಲ್ಲಾ ನೋಡಿದ ಶ್ರೀಪಾದರಾಯರು ಪರಮಾನಂದಭರಿತರಾಗಿ ಕಣ್ಣಲ್ಲಿ ಬಾಷ್ಪೋದಕಗಳು ಕೋಡಿಯಿಟ್ಟು ಹರಿಯುತ್ತಿರಲು ಹಾಗೆಯೇ ಹೋಗಿ ಸ್ವಾಮಿಯ ಪಾದದ ಮೇಲೆ ತಲೆಯನ್ನಿಟ್ಟು ಸಾಷ್ಟಾಂಗವಾಗಿ ವಂದಿಸಿದರು. ತಕ್ಷಣ ಸ್ವಾಮಿಯು ನರ್ತನವನ್ನು ನಿಲ್ಲಿಸಿ ಬಿಟ್ಟನು. ಯಾವಾಗ್ಗೆ ಶ್ರೀಪಾದರಾಯರಿಗೆ ಸ್ವಾಮಿಯ ದರ್ಶನವಾಯಿತೋ ಆಗ ಬಲಗಾಲ ಮೇಲೆ ಎಡಗಾಲನ್ನಿಟ್ಟಿದ್ದ ಆತನು ಹಾಗೆಯೇ ನಿಂತುಬಿಟ್ಟದ್ದರಿಂದಲೂ ಮತ್ತು ಅದೇ ವೇಳೆಯಲ್ಲಿ ವ್ಯಾಸರಾಯರು ಸಂತೋಷಪರವಶರಾಗಿ—

ಹೇ ಕೃಷ್ಣ ಪುಷ್ಣಾಸಿ ನಿಜಂತುಭಕ್ತಂ । ವಿಶೇಷತೋಮಾಂ
ನಹಿಸಂಶಯೋತ್ರ ॥
ತಥಾಪಿಲೋಕೇ ಯಶಸೋವಿತತ್ಯೈ । ವಾಮಂತು ಪಾದಂ
ತ್ವಿತರತ್ರನಿಕ್ಷಿಪ ॥
ಮತೀಮದೀಯೋ ಮಮಶಿಷ್ಯ ಸಂಘಕೈಃ । ಸಂಪೂಜ್ಯ
ಮಾನೋನಿವಸೇತಿಯಾಚಿತಃ ॥
ಅದ್ಯಾಪಿ ವಾಮಂ ನಿಜಪಾದಪಂಕಜಂ । ಸ್ವದಕ್ಷಿಣಾಂಘ್ರೌ
ಪ್ರಣಿಧಾಯ ದೃಶ್ಯತೆ ॥

ಹೀಗೆಂಬದಾಗಿ ಪ್ರಾರ್ಥಿಸಿದ್ದರಿಂದಲೂ ಈಗಲೂ ಆ ಮೂರ್ತಿಯು ಅಂದಿನಂತೆಯೇ ಇರುವದು. ರುಕ್ಮಿಣಿ-ಸತ್ಯಭಾಮೆಯರು ಸಹ ಹಿಂಧೊಂದು

ಕಾಲನ್ನು ಸ್ವಲ್ಪ ಮೇಲಕ್ಕೆತ್ತಿದ್ದು ಈಗಲೂ ನೋಡಬಹುದು. ಈ ರೀತಿ ಸ್ವಾಮಿಯು ದರ್ಶನದಿರದ ಧನ್ಯರಾಗಿದ್ದ ಶ್ರೀಪಾದರಾಯರು ವ್ಯಾಸರಾಯರ ಭಕ್ತಿಭಾವವನ್ನೂ-ಶ್ರೀಕೃಷ್ಣಪರಮಾತ್ಮನು ಅವರಿಗೊಲಿದು ಬಂದುದನ್ನೂ ಕಣ್ಣಾರೆ ಕಂಡು ಅಂದಿನಿಂದ ಆ ಮೂರ್ತಿಯನ್ನು ವ್ಯಾಸರಾಯರಿಗೇ ಪೂಜೆಗೋಸ್ಕರ ಕೊಟ್ಟುಬಿಟ್ಟರು. ಅದರಿಂದ ಅದು ಈ ಹೊತ್ತಿಗೂ ಕುಂದಾಪುರ ವ್ಯಾಸರಾಯರ ಮಠದಲ್ಲಿರುವದು.

"ನೀಲಾಪಾಥಾರ್ಚಿತಾಂಘ್ರಿಃ ಕಲುಷಚಯಹರೇಭೀಮರಥ್ಯಾಃತೀರೇ|
ರಂಗಕ್ಷೇತ್ರೇಽಥ ಗುಪ್ತಃ ಸಕಲ ಸುಖಕರಿ ವೇಣುಗೋಪಾಲ ಕೃಷ್ಣಃ ||
ಸ್ವಪ್ನೇಲಬ್ಧೋಯಮಸ್ಮದ್ವಿಜವರಗುರವೆ ವ್ಯಾಸರಾಜಾಯಯೇನಾ |
ದಾಯಿ ಶ್ರೀಪಾದರಾಜಃ ಸಭವತುನಿತರಾಂ ಭೂಯಸೇ ಶ್ರೇಯಸೇಮೇ"||

(ಶ್ರೀಪಾದರಾಜಾಷ್ಟಕ)

ಭಕ್ತರಿದ್ದಲ್ಲಿ ಭಗವಂತನಿರುವನೆಂದು ಬೇರೆ ಹೇಳಕಾಗಿಲ್ಲ. ಸ್ವಯಂ ಸ್ವಾಮಿಯೇ ಹೀಗೆ ಹೇಳಿಕೊಂಡಿರುವನು:—

"ನಾಹಂ ವಸಾಮಿ ವೈಕುಂಠೇ ನ ಯೋಗಿ ಹೃದಯೇ ರವೌ ||
ಮದ್ಭಕ್ತಾ ಯತ್ರಗಾಯಂತಿ ತತ್ರತಿಷ್ಠಾಮಿನಾರದ" ||

ಅಂದಮೇಲೆ ಇಂಥಾ ಸ್ವಾಮಿಯನ್ನು ವಶಮಾಡಿಕೊಂಡ ಭಕ್ತರ ಸಹವಾಸವು ಕಡೆಗೆ ಅವರ ಚರಿತಾಮೃತವು ಮಂದಮತಿಗಳಾದ ನಮಗೆ ಜನ್ಮ ಜನ್ಮಾಂತರಕ್ಕೂ ತಾರಕವಾಗದೆ ಹೋದೀತೆ? ನಡೆಯಿರಿ ಹಾಗಾದರೆ, ಮಹಾಭಾಗವತ ಶಿಖಾಮಣಿಗಳಾದ ಶ್ರೀ ಗುರು ಗೋಪಾಲದಾಸರು ಆ ಸ್ವಾಮಿಯನ್ನು ಏನೆಂದು ಬೇಡಿಕೊಂಡರೋ ನಾವೂ ಅದನ್ನೇ ಬೇಡಿ ಕೊಳ್ಳೋಣ!

ಅನ್ಯಾವಾರ್ತೆಗೆ ಪೋಗಲೀಸದೆಮನಾ ನಿನ್ನಂಘ್ರಿಯೊಳ್ ನಿಲ್ಲಿಸೋ|
ನಿನ್ನಾವಾರ್ತೆಯ ಕೇಳಿಸಯ್ಯಮನದೀ ನಿನ್ನಾಮಕೊಂಡಾಡಿಸೋ ||
ನಿನ್ನಾಮೂರ್ತಿಯ ತೋರಿಸಯ್ಯ ಮನದೀ ನಿನ್ನರ್ಚನೇಮಾಡಿಸೋ|
ನಿನ್ನಂತಾಗಲಿ ಸರ್ವ ಇಂದ್ರಿಯಗಳೂ ನಿನ್ನಾಜ್ಞೆಗಳಾ ಕೂಡಿಸೋ ||

# ೫ ಅದೃಷ್ಟ ಪರೀಕ್ಷೆ.



ಒಮ್ಮೆ ಶ್ರೀಪಾದರಾಜತೀರ್ಥರು ತಮಗೆ ಮೊದಲು ಬಿರುದಾಂಕಿತವನ್ನು ದಯಪಾಲಿಸಿದಂಥ ಉತ್ತರಾದಿಮಠದ ಶ್ರೀ ರಘುನಾಥತೀರ್ಥರನ್ನು ಕೂಡಿಕೊಂಡು ಸಂಚಾರಕ್ಕೆ ಹೊರಟರು. ಈ ರಘುನಾಥತೀರ್ಥರಿಗೆ ದುಃಖಪ್ರಾರಬ್ಧದಿಂದ ಆದರುರೋಗವಿತ್ತೆಂದೂ, ಯಾರು ಏನು ಪಕ್ವಾನ್ನ ಭಿಕ್ಷೆ ಮಾಡಿಸಿದರೂ ಕಡೆಗೆ ಮೆಣಸಿನ ನೀರು, ಅನ್ನ ಉಣ್ಣುವ ಹೊತ್ತೇ ಇವರ ಪಾಲಿಗೆ ಬರುತ್ತಿತ್ತೆಂದೂ ಹಿಂದೆಯೇ ತಿಳಿಸಿರುವೆವು. ಇವರ ವಿರುದ್ಧನಾಗಿ ನಮ್ಮ ಶ್ರೀ ಪಾದರಾಜರಿಗೆ ಸುಖಪ್ರಾರಬ್ಧವಿದ್ದುದರಿಂದ ಅವರು ಎಲ್ಲಿಯೇ ಹೋದರೂ ಪಂಚಭಕ್ಷ್ಯ ಪರಮಾನ್ನಗಳೂ, ಅರವತ್ತುನಾಲ್ಕು ಬಗೆಯ ಶಾಕ-ಪಾಕಗಳೂ ಆಗಿಯೇ ತೀರುತ್ತಿದ್ದವು ಇದು ಅವರವರ ಪೂರ್ವಜನ್ಮಾರ್ಜಿತ ಕರ್ಮಫಲ ಹೋದ ಹೋದಲ್ಲಿ ಹೀಗೆಯೇ ನಡೆಯುತ್ತಲಿತ್ತು. ಇದನ್ನು ಕಂಡು ಒಬ್ಬಾನೊಬ್ಬ ಮಹಾರಾಜನು ಇವರ ಪ್ರಾರಬ್ಧವನ್ನು ಪರೀಕ್ಷೆಮಾಡಿಬಿಡೋಣವೆಂದು ಯೋಚಿಸಿದನು.

"ಆರಿಗಾದರು ಪೂರ್ವಕರ್ಮಬಿಡದೂ|
ಬೇರೆ ಬಯಸಿದರೆ ತಾ ಬರಲರಿಯುದಯ್ಯಾ"||

ಎಂಬ ಕನಕದಾಸರ ಉಕ್ತಿಯಂತೆ ಎಂಥವರೇ ಆದರೂ ಅದನ್ನನುಭವಿಸಿಯೇ ತೀರಬೇಕಾಗುವದು. ಇದು ದೈವಕೃತವಾದ್ದರಿಂಥ ಮನುಷ್ಯಮಾತ್ರರಾದವರು ಎಂದಿಗೂ ತಪ್ಪಿಸಲಾರರು. ಭಾಸ್ಕರಾಚಾರ್ಯರಂಥ ಜ್ಯೋತಿರ್ವಿದರು ತಮ್ಮ ಮಗಳ ವೈಧವ್ಯವನ್ನು ತಪ್ಪಿಸಲಿಕ್ಕೆ ಪ್ರಯತ್ನಮಾಡಿ ಕಡೆಗೆ ಬೆಪ್ಪಾಗಿ ಕೂಡ್ರಲಿಲ್ಲವೆ! ಇವರೂ ಹಾಗಿರಲಿ, ಕೇವಲ ತ್ರಿಕಾಲಜ್ಞಾನಿಗಳಾದ ವಸಿಷ್ಠ ಮಹಾಮುನಿಗಳಂಥವರಿಗೂ ಪಟ್ಟಾಭಿಷೇಕಕ್ಕೆಂದು ತೆಗೆದ ಶುಭಮುಹೂರ್ತದಲ್ಲಿ ಶ್ರೀರಾಮನನ್ನು ಕಟ್ಟರಣ್ಯಕ್ಕೆ ಕಳುಹಿಸುವ ಹೊತ್ತು ಬರಲಿಲ್ಲವೇ? ಇಂತಿತವರ ಪಾಡೇ ಹೀಗಾಗಿರಲು, ನಾವು ಯಾವ ಗಿಡದ ತೊಪ್ಪಲು? ರಾಜನು ಇಷ್ಟೊಂದು ಆಳವಾದ ವಿಚಾರವನ್ನು ಮಾಡಲಿಲ್ಲ. ಏಕದಾ ಧುಮುಕಿಬಿಟ್ಟನು.

'ಧ್ರುವಮಾಶ್ವಾಸನಾಮಾತ್ರಂ ದುಃಖೇಪೀಲವ ಬುದ್ಧಿಮು||'

ಅಂದರೆ—ದುಃಖಕಾಲದಲ್ಲಿ ಮಂದಬುದ್ಧಿಗಳಿಗೆ ಸಮಾಧಾನೋಕ್ತಿಮಾತ್ರವಾದುದು ದೈವವೇ ಹೊರತು ಅದರಲ್ಲಿ ಮತ್ತೇನೂ ಹುರುಳಿಲ್ಲವೆಂದೂ,—

'ಮೂರ್ಖೈಃಪ್ರಕಲ್ಪಿತಂ ದೈವಂ ತತ್ಪರಾಸ್ತೇಕ್ಷಯಂ ಗತಾಃ'||

ಎಂಬಂತೆ—ದೈವವು ಅಥವಾ ಪ್ರಾರಬ್ಧವು ಮೂರ್ಖರಿಂದ ಕಲ್ಪಿತವಾದುದು. ಇದನ್ನಾರು ನಂಬುವರೋ, ಅವರೆಲ್ಲರೂ ಕ್ಷಯವನ್ನೇ ಹೊಂದುವರೆಂದೂ ಆತನ ತಿಳುವಳಿಕೆ. ಅಂತೆಯೇ ಕ್ಷುದ್ರವಾದೀ ಪ್ರಾರಬ್ಧವನ್ನು ತಪ್ಪಿಸುವದು ಮಾನವನ ಕೈಯಲ್ಲಿರುವದೆಂದು ಅದಕ್ಕೆ ಟೊಂಕ ಕಟ್ಟಿ ನಿಂತನು ಹೀಗೆ ನಿಂತದ್ದೊಂದೇ ತಡ, ಶ್ರೀ ರಘುನಾಥತೀರ್ಥರಿಗೆ ತನ್ನ ಮನೆಯಲ್ಲಿ ಭಿಕ್ಷೆ ಮಾಡಿಸಿ ಅತ್ಯಂತ ಷಡ್ರಸೋಪೇತವಾದ ವಿವಿಧ ಭಕ್ಷ್ಯಭೋಜ್ಯಗಳನ್ನು ಸಿದ್ಧಪಡಿಸುವಂತೆ ಏರ್ಪಾಟು ಮಾಡಿದನು ಹಾಗೂ ಇದರ ವಿರುದ್ಧವಾಗಿ ಶ್ರೀಪಾದರಾಯರನ್ನು ಒಂದು ಕಟ್ಟಾರಣ್ಯಕ್ಕೆ ಕರೆದುಕೊಂಡು ಹೋಗಿ, (ವನಭೋಜನ ಮಾಡಿಸುತ್ತೇನೆಂಬ ಸುಳ್ಳು ನೆವದಿಂದ) ಅಲ್ಲಿ ಅವರ ಸುತ್ತಲೂ ಸಂಜೆಯು ವರೆಗೆ ಕಾವಲಿರುವಂತೆ ಸೇವಕರಿಗೆ ಅಪ್ಪಣೆ ಮಾಡಿದನು ಮೊದಲೇ ರಾಜಶಾಸನ. ಕೇಳಬೇಕೇ? ಆತನ ಅಪ್ಪಣೆಯಂತೆ ತತ್‌ಕ್ಷಣದಲ್ಲಿಯೇ ಶ್ರೀಪಾದರಾಜರು ಅರಣ್ಯಕ್ಕೆ ಕಳುಹಲ್ಪಟ್ಟರು ರಘುನಾಥತೀರ್ಥರು ಅರಮನೆಗೆ ತೆರಳಿದರು ಅಲ್ಲಿಯಾದರೋ ಹೊತ್ತಿಗೆ ಸರಿಯಾಗಿ ಸರ್ವವೂ ಸಿದ್ಧವಾಗಿತ್ತು. ರಘುನಾಥತೀರ್ಥರು ಶ್ರೀ ರಾಮದೇವರ ಪೂಜೆ ಮಾಡಿದರು. ಪೂಜಾ ವಿನಿಯೋಗಗಳೆಲ್ಲ ಮುಗಿದವು. ಇನ್ನೇನು? ಎಲೆ ಹಾಕಬೇಕು. ಸಾವಿರಾರು ಬ್ರಾಹ್ಮಣ ಸುವಾಸಿನಿಯರ ಹಾಗೂ ಯತಿಗಳ ಸಂತರ್ಪಣೆಯೂ ನಡೆಯಬೇಕು. ಎಲ್ಲರಿಗೂ ಗಡಿಬಿಡಿಯ ಕಾಲ. ಮಹಾರಾಜನ ಮೋರೆಯ ಮೇಲೆ ಈಗ ಒಳ್ಳೇ ನಗುವು. ಶ್ರೀ ರಘುನಾಥತೀರ್ಥರಿಗೆ ಇದ್ದ ದುಃಖಪ್ರಾರಬ್ಧವನ್ನು ಇಂದು ನಾನು ತಪ್ಪಿಸಿಬಿಟ್ಟೆನಲ್ಲ! ಇಷ್ಟೇ ಅಲ್ಲ, ಸುಖಪ್ರಾರಬ್ಧವೆಂದು ಹೇಳಿಕೊಂಡು ಬೇಕುಬೇಕಾದ ಪಂಚಪಕ್ವಾನ್ನಗಳನ್ನು ಹೊಡೆಯುತ್ತಿದ್ದಂಥ ಶ್ರೀಪಾದರಾಯರು ಈ ಹೊತ್ತು ಒಂದು ಗೂಜ್ಲು ಅನ್ನವನ್ನು ಕಾಣಲಿ, ನೋಡೋಣ! ಇದೆಲ್ಲವೂ ಬುಟಾಟಿಕೆಯ ಮಾತು. ಸುಮ್ಮನೆ ಮಂದಿಗೆ ಟೊಪ್ಪಿಗೆ ಹಾಕುವ ಮಾರ್ಗ ಪ್ರಾರಬ್ಧವು ಏನು ಮಾಡೀತು? ಅದೊಂದು ಕಾಲು ಮುರಿದ ಗುಬ್ಬಿಯಂತಿರುವದು, ನಾವಾಗಿ ಅದನ್ನು ತೇದು

ಕೊಂಡು ದೈವೇಚ್ಛೆಯಿಂದು ಹೇಳಿದರೆ, ಅದಕ್ಕಾರೇನು ಮಾಡಬೇಕು? ಇವೇ ಮೊದಲಾದ ದರ್ಪೋಕ್ತಿಗಳೇ ಅವನ ನಗುವಿಗೆ ಕಾರಣವಾಗಿದ್ದವು. ವಿಧಿವಿಲಾಸವು ವಿಚಿತ್ರವಾದದ್ದೆಂಬುದು ಅವನಾ ಸ್ಥೂಲಬುದ್ಧಿಗೆ ಇನ್ನೂ ಹೊಳೆದಿರಲಿಲ್ಲ. ಅಣು-ರೇಣು-ತೃಣ-ಕಾಷ್ಠ ಪರಿಪೂರ್ಣನಾದಾ ಭಗವಂತನ ಮಾಯಾಜಾಲವನ್ನು ಭೇದಿಸಿಕೊಂಡು ಹೋಗುವಲ್ಲಿ ದೇವಾನುದೇವತೆಗಳೇ ಕೈಯೂರಿರುವಾಗ ನನ್ನ ಪಾಡೇನೆಂಬದನ್ನೂ ಆತನು ಯೋಚಿಸಲಿಲ್ಲ

'ಕಡೆಗಾಭೂಪನಶಕ್ತಿನಾಲ್ಗಳಿಗೆಸಲ್ಗುಂ ಮರ್ತ್ಯಕೀಟಂಗಳೊಳ್' ||

ಎಂಬ ಕವಿಯ ಉಕ್ತಿಯನ್ನು ಮನ್ನಿಸಲಿಲ್ಲ. ಸಾಮಾನ್ಯ ಮನುಷ್ಯರಿಗೇನೇ ಎಷ್ಟೆಷ್ಟೋ ಅಹಂಕಾರ. ಅಂದಮೇಲೆ—

'ಯೌವನಂಧನಸಂಪತ್ತಿಃ ಪ್ರಭುತ್ವ ಮವಿವೇಕತಾ ||
ಏಕೈಕಮಪ್ಯನರ್ಥಾಯ ಕಿಮುಯತ್ರ ಚತುಷ್ಟಯಂ' ||

ಎಂಬದಾಗಿ—ಇವು ಒಂದೊಂದೇ ಅನರ್ಥವನ್ನುಂಟು ಮಾಡುವಲ್ಲಿ ಅತ್ಯಂತ ಸಮರ್ಥಗಳಾಗಿರುವಾಗ (ಯೌವನ-ಧನಸಂಪತ್ತಿ-ಪ್ರಭುತ್ವ-ಅವಿವೇಕತೆ) ನಾಲ್ಕೂ ಒತ್ತಟ್ಟಿಗೆ ಕೂಡಿದಂಥ ಮಹಾರಾಜನ ಸ್ಥಿತಿಯನ್ನು ಕೇಳಬೇಕೇ? ಆತನು ಅಹಂಕಾರಕ್ಕೊಳಗಾದನು. ಕ್ಷತ್ರಿಯ ಬಲವನ್ನು ತೋರಿಸಲಿಕ್ಕೆ ಹೋದನು. ಹಿಂದಕ್ಕೆ ತ್ರೇತಾಯುಗದಲ್ಲಿ:—ಚತುರ್ಮುಖ ಬ್ರಹ್ಮನಿಗೆ ಸರಿಯಾಗಿ ಸೃಷ್ಟಿಗೆ ಪ್ರತಿಸೃಷ್ಟಿಯನ್ನು ಮಾಡಿದಂಥ ಮಹಾ ಪರಾಕ್ರಮಿಯಾದ ವಿಶ್ವಾಮಿತ್ರನಂತಹ ಅರಸನೇ 'ಧಿಗ್ಬಲಂ ಕ್ಷತ್ರಿಯಬಲಂ' ಎಂದು ಹೇಳಿಕೊಂಡಿರುವಾಗ ಕಲಿಕಾಲದ ಅಲ್ಪರಾದ ನಮ್ಮಂಥವರ ಪರಿಣಾಮವೇನೆಂಬುದನ್ನು ಆತನು ತುಸವಾದರೂ ಯೋಚಿಸಬೇಕಾಗಿತ್ತು. ಇಲ್ಲಿಯವರೆಗೆ ಏನೂ ತಡೆಯಿಲ್ಲದೆ ಸಾಗಿ ಹೋದಂಥ ಕಾರ್ಯದಿಂದ ಮಹಾರಾಜನು ಸಂತೋಷಭರಿತನಾಗಿ ಮೈಮ್ಮರೆತಿದ್ದನು. ಆತನಿಗೆ ಇದೊಂದೂ ಯೋಚನೆ ಹುಟ್ಟಲಿಲ್ಲ ಆದರೇನು? ಸತ್ಯಸಂಕಲ್ಪನಾದಾ ಭಗವಂತನು ತನ್ನ ಸಂಕಲ್ಪವನ್ನು ನೆರವೇರಿಸುವುದಕ್ಕೆ ಸಿದ್ಧನಾಗಿ ಕುಳಿತಿದ್ದನು. ಆತನ ಸಂಕಲ್ಪಕ್ಕೆ ತಡೆಯುಂಟೆ? ಆಗಲೇ ರಾಜನಿಗಿದ್ದ ಒಬ್ಬನೇ ಒಬ್ಬ ಮಗನು ಏಕದಾ ಸತ್ತುಹೋದನು! ತೀರಿತು, 'ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ' ವೆಂಬ ನಾಣ್ಣುಡಿಯಂತೆ ಇಕ್ಕಿಯ ವರೆಗೆ ಮಹಾರಾಜರು ಮನಸ್ಸಿನಲ್ಲಿ ಮಾಡಿದ ಮಂಡಿಗೆಗಳೆಲ್ಲ ಒಂದೇ ಒಂದು ಕ್ಷಣದಲ್ಲಿ ಭಗವಂತನ

ಮಾಯೆಯಿಂದ ನುಚ್ಚುನೂರಾಗಿ ಹೋದವು. ಭಗ್ನ ಮನೋರಥನಾದನು. ಇಷ್ಟೇ ಅಲ್ಲ. "ಪಾಪಕ್ಷಯವಾಗಲೆಂದು ಕಾಶಿಗೆ ಹೋದರೆ ಕುಲಕ್ಷಯ ವಾಗಲೆಂದು ಮೊಸಳೆ ಎಳಕೊಂಡು ಹೋಯಿತು" ಎಂಬ ಗಾದೆಗನು ಸಾರವಾಗಿ ಮಹಾನುಭಾವರಾದ ಯತಿಗಳನ ಸಂತೋಷಪಡಿಸಿ ಅವರಿಂದ ಅನುಗ್ರಹ ಸಂಪಾದನೆ ಮಾಡಿಕೊಳ್ಳಬೇಕೆಂಬ ನನ್ನ ಕುತೂಹಲವು ಹೊತ್ತಿಟ್ಟಿ ಗೆಳೆದು ಕುಲನಾಶವನ್ನು ಮಾಡಿಕೊಂಡಂತಾಯಿತಲ್ಲಾ! ಎಂಬದಾಗಿ ಹಲುಬಹತ್ತಿದನು. ಮಹನ್ನೀಯರಾದ ಯತಿಗಳನ್ನು ಪೂಜಿಸಿದ ಫಲವು ಇದೇ ಏನೆಂದು ವಾಚಕರು ಇಲ್ಲಿ ನಮಗೊಂದು ಪ್ರಶ್ನೆ ಹಾಕಬಹುದು; ಮತ್ತು ಲೋಕದಲ್ಲಿ ಸತ್ಕಾರ್ಯಗಳನ್ನು ಮಾಡದೆ ದುಷ್ಕಾರ್ಯಗಳನ್ನು ಮಾಡಬೇಕೆಂದೂ ಸತ್ಕಾರ್ಯಕ್ಕೆ ಫಲವಿಲ್ಲೆಂದೂ ಅವರು ಕೂಗಿಕೊಳ್ಳ ಬಹುದು. ವಾಚಕವೃಂದ! ಹಾಗೆ ಮಾತ್ರ ತಿಳಿಯಕೂಡದು. ನಾವು ಭಗವಂತನನ್ನಾಗಲಿ, ಭಗವದ್ಭಕ್ತರನ್ನಾಗಲಿ ಪೂಜಿಸಬೇಕಾದರೆ ಕೇವಲ ಭಕ್ತಿಭಾವವನ್ನಿಟ್ಟರಬೇಕಲ್ಲದೆ ಡಂಭಾಚಾರಕ್ಕಾಗಲಿ—ಪರರನ್ನು ಕೆಡಿಸ ಬೇಕೆಂಬ ದುರುದ್ದೇಶದಿಂದಾಗಲಿ ಎಂದಿಗೂ ಮಾಡಬಾರದು. ಹಾಗೆ ಮಾಡಿದ್ದೇ ಆದರೆ ಫಲವು ದೊರೆಯುವದಂತೂ ಇರಲಿ, ಅದರ ಬದಲು ಅನಿಷ್ಟವು ಪ್ರಾಪ್ತಿಯಾಗುವದು. ಹಿಂದಕ್ಕೆ ದುರ್ಯೋಧನನು ವಿಷ್ಣು ಪ್ರೀತಿಗಾಗಿ ವೈಷ್ಣವ ಯಾಗವನ್ನು ಮಾಡಿದನಾದರೂ ಸ್ವಾಮಿಯು ಆತ ನನ್ನು ನರಕದಲ್ಲೇ ತಳ್ಳಿಬಿಟ್ಟನೇಕೆಂಬದರ ರಹಸ್ಯವನ್ನು ಯೋಚಿಸಿದರೆ ಈ ಮಾತು ಗೊತ್ತಾಗುವದು. ಶ್ರೀ ವೇದವ್ಯಾಸರು ಈ ಮಾತನ್ನು ದುರ್ಯೋ ಧನನ ಬಾಯಿಯಿಂದಲೇ ಕರ್ಣನ ಎದುರಿಗೆ ಹೀಗೆ ಹೇಳಿಸಿರುತ್ತಾರೆ.

"ರಾಜಸೂಯಂ ಪಾಂಡವಸ್ಯ ದೃಷ್ಟ್ವಾತ್ವಕ್ರತುವರಂ ತದಾ ||
ಮಮಸ್ಪೃಹಾಸಮುತ್ಪನ್ನತಾಂ ಸಂಪಾದಯ ಸೂತಜ" ||

(ಭಾರತ-ವನಪರ್ವ ೨೫೬-೬)

(ಎಲೈ ಕರ್ಣನೇ, ಧರ್ಮರಾಜನು ಮಾಡಿದ ರಾಜಸೂಯ ಯಾಗ ವನ್ನು ನೋಡಿದಾಗಲಿಂದ ನನಗೆ ಅಸೂಯೆಯುಂಟಾಗಿದೆ. ಅಂಥಾ ಮರ್ಯಾದೆಯನ್ನು ನನಗೆ ಸಂಪಾದನೆ ಮಾಡಿಕೊಡು.)

ನೋಡಿದಿರಾ! ಇಂಥಾ ದುರುದ್ದೇಶವು ಭಗವಂತನಲ್ಲಿ ಪ್ರೇಮವನ್ನು ಹುಟ್ಟಿಸೀತೇ? ಅತಏವ ವಿಷ್ಣುಯಾಗ ಮಾಡಿದರೂ ಆತನಿಗೆ ನರಕವೇ

ಗತಿಯಾಯಿತು. ಇಲ್ಲಿಯಾದರೂ ಹೇಗೆಯೋ ರಾಜನ ಉದ್ದೇಶವು ಭಕ್ತಿ ಪ್ರೇರಕವಾಗಿಲ್ಲ ಅದೊಂದು ಅಹಂಕಾರ ವರ್ತನ ‘ಅಹಂಕಾರಕ್ಕೆ ಉದಾಸೀನವೇ ಮದ್ದು’ವೆಂಬಂತೆ ಸ್ವಾಮಿಯೂ ಉದಾಸೀನನಾದನು. ಅರಮನೆಯೆಲ್ಲವೂ ಶೋಕಾಕುಲವಾಯಿತು. ಇನ್ನೆಲ್ಲಿಯ ಬ್ರಾಹ್ಮಣರ ಭೋಜನ? ಎಲ್ಲಿಯ ಗತಿಗಳ? ಇದನ್ನು ಕೇಳುವವರಾರು? ಪಾಮರರಾದ ನಮ್ಮಂಥ ಸಂಸಾರಿಕರ ಸ್ಥಿತಿಯೋ ಹೇಳಲ್ಲವೇ? ನಮಗೆ ಸುಖ-ಸಂತೋಷವುಂಟಾದಾಗ ಮಾತ್ರ, ಅದೂ ಏನೋ ಕಿಂಚಿತ್ತು ದೇವರ ದಿಂಡರಿಸುವೆವು! ಅದೇ ದುಃಖವುಂಟಾಗಲು ದೇವರು ದಿಂಡರನ್ನು ಸಿಟ್ಟಿನಿಂದ ಕಟ್ಟಿ ಒಗೆಯುವೆವು. ಇಂಥವರಿಗೆ ದೇವರ ಗುರುತಾದರೂ ಹೇಗೆ ಸಿಕ್ಕೀತು? ‘ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ’ ಎಂಬಂತೆ ಕಾಯಾ-ವಾಚಾ ಮನಸ್ಸಿನಲ್ಲಿ ಏಕರೂಪರಾದ ಮಹಾತ್ಮರಿಗೇ ಅಲ್ಲದೆ ಆತನು ನಮ್ಮಂಥ ಚಂಚಲಚಿತ್ತರಾದವರಿಗೆ ಎಂದಿಗೂ ಒಲಿಯಲಾರ. ಇರಲಿ.

ಶ್ರೀರಘುನಾಥತೀರ್ಥರು—ಶ್ರೀರಾಮದೇವರ ಪೆಟ್ಟಿಗೆಯನ್ನು ಹೆಗಲಿಗೆ ಹಾಕಿಕೊಂಡು ಶಿಷ್ಯರೂ-ಬ್ರಾಹ್ಮಣರೂ ಸಹಿತವಾಗಿ ಬೇರೊಂದು ಸ್ಥಳಕ್ಕೆ ಹೋಗಿ ದೇವರನ್ನು ಸಂಪ್ರೋಕ್ಷಿಸಿ, ಪುನಃ ಅಡಿಗೆ ಮಾಡಿಸಿ ಬ್ರಾಹ್ಮಣಭೋಜನ ಮಾಡಿಸಿದರು. ಯಥಾಪ್ರಕಾರ ತಾವು ಒಂದು ಮೊಣಶಿನ ನೀರೂ, ಅನ್ನವನ್ನೇ ಉಂಡರು. ರಾಜನು ಮಾಡಿಸಿದ ಪಂಚಭಕ್ಷ್ಯಾನ್ನಗಳು ಅಲ್ಲಿಯೇ ಕುಳಿತವು. ದೈವವಿಲಾಸವನ್ನು ಕಂಡವರಾರು? ಅಂತೆಯೇ ಭಗವದ್ಭಕ್ತ ಶಿಖಾಮಣಿ ಕನಕದಾಸನು—

ರಾಗ—ಕಾಂಬೋದಿ—ಝಂಪೆ ತಾಳ ||

ಪ್ರಾಚೀನ ಕರ್ಮವು ಬಿಡಲರಿಯದೋ | ಯೋಚನೆಯ ಮಾಡಿ ಬಳಲುವದ್ಯಾಕೆ ಮನುಜಾ ||ಪಲ್ಲ||

ಸೇತುವೆಗಟ್ಟಿ ಲಂಕೆಗೆ ಹಾರಿ ಹನುಮಂತ | ಖ್ಯಾತಿಯಿಂದಲಿ ರಾವಣನ ಕೊಲಿಸಿ||

ಸೀತೆಯನು ತಂದು ಶ್ರೀರಾಮನಿಗೆ ಕೊಡಲವನ | ಪ್ರೀತಿಯಲಿ ಕೌಪೀನವ ಬಿಡಿಸಲಿಲ್ಲ ಹರಿಯು || ೧ ||

ದೇಶದೇಶಗಳೆಲ್ಲ ಚರಿಸುವಾರವಿಂಥಕೆ | ಏಕಗಾಲಿಯು ಸಪ್ತಕುದುರೆ ಕಟ್ಟಿ||

ಲೋಕಲೋಕಗಳೆಲ್ಲ ಚರಿಸುವಾ ಅರುಣಂಗೆ | ಬೇಕೆಂದು ಚರಣಗಳ ಕೊಡ
ಲಿಲ್ಲ ಹರಿಯು || ೨ ||

ಸಾಸಿರಾನಾಮದಾ ಬಡದಾದಿ ಕೇಶವನ | ಬ್ಯಾಸರದೆ ಪೆಗಲಮೇಲಿರಿಸಿ
ಕೊಂಡು ||

ದೇಶದೇಶಕ್ಕೆಲ್ಲ ಚರಿಸುವಾಗರುಡಂಗೆ | ನಾಸಿಕದ ಕೊನಿಡೊಂಕು ತಿದ್ದ
ಲಿಲ್ಲ ಹರಿಯು || ೩ ||

ಎಂಬದಾಗಿ ಹಾಡಿಕೊಂಡಿದ್ದಾನೆ

ಎಲೈ ಪಾಠಕವೃಂದ! ಇಲ್ಲಿ ಹೇಗೂ ರಘುನಾಥತೀರ್ಥರ ಭೋಜನ ವಾದಂತಾಯಿತು. ಅದರ ಕೂಡ ಅವರ ದುಃಖಪ್ರಾರಬ್ಧದ ಪರೀಕ್ಷೆಯೂ ಆದಂತಾಯಿತು. ಇರಲಿ. ಅತ್ತ ಅರಣ್ಯಕ್ಕೆ ಕಳುಹಲ್ಪಟ್ಟ ಶ್ರೀಪಾದರಾಜರ ಸ್ಥಿತಿಯೇನಾಯಿತೆಂಬದನ್ನಿಷ್ಟು ನೋಡೋಣ, ನಡೆಯಿರಿ.

ರಾಜನೇನೋ ಇವರನ್ನು ಕಟ್ಟಾರಣ್ಯಕ್ಕೆ ಕಳುಹಿದನಷ್ಟೆ? ಅಲ್ಲಿಯಾದರೋ ನೀರಿಲ್ಲ ನೆರಳಿಲ್ಲ. ಮನುಷ್ಯರ ಸುಳಿವು ಕೂಡಾ ಇಲ್ಲ. ಇದರ ಮೇಲೆ 'ಸಾಲದ ದಕ್ಕ ನೀಲದ ಬಾವುಲಿ' ಎಂಬಂತೆ ಸುತ್ತಲೂ ರಾಜರ ಬಲವಾದ ಕಾವಲ ತಾಸಾಯಿತು. ಎರಡು ತಾಸಾಯಿತು. ಮಧ್ಯಾಹ್ನಕ್ಕೆ ಬಂತು ಇವರು ನೋಡಿದರು ಹಿಂದು ನರಪ್ರಾಣಿಯೂ ಸುಳಿಯಲಿಲ್ಲ ರಾಜನು ವನಭೋಜನ ಮಾಡಿಸುತ್ತೇನೆಂದು ಸುಳ್ಳುಹೇಳಿ ನಮ್ಮ ಪ್ರಾರಬ್ಧವನ್ನು ಪರೀಕ್ಷಿಸುವದಕ್ಕಾಗಿ ಈ ರೀತಿ ಮಾಡಿರುತ್ತಾನೆ; ಆಗಲಿ. ಇದು ನಮ್ಮ ಪರೀಕ್ಷೆಯಲ್ಲ ನಮ್ಮಪಾಲಿನ ಸ್ವಾಮಿಯನ್ನೇ ಪರೀಕ್ಷಿಸಿದಂತಾಯಿತು. ಯಾಕಂದರೆ ನಾವು ಹಗಲಿರುಳು ಆತನನ್ನೇ ನೆಬಿಕೊಂಡಿರತಕ್ಕವರು ಆತನ ಮನಸ್ಸಿಗೆ ಬಂದಂತಾಗಲಿ ಎಂದಿಷ್ಟೇ ನುಡಿದು, ಶ್ರೀಪಾದರಾಜರು ಸುಮ್ಮನೆ ಕುಳಿತುಬಿಟ್ಟರು. ಇವರು ಸುಮ್ಮನೆ ಕುಳಿತರೂ ಸ್ವಾಮಿಯು ಹೇಗೆ ಸುಮ್ಮನೆ ಕುಳಿತಾನು?

"ಪಡೆದಜನನಿಯಂತೆರದೆ ಸ್ವಾಮಿ ಹೊಣೆಗಾರರಾಗಿ |

ಬಿಡದೆ ರಕ್ಷಿಪನಿದಕೆ ಸಂದೇಹಬೇಡಾ" ||

ಎಂಬಂತೆ ಹೊಣೆಗಾರನಾದಾಭಗವಂತನು ಕೈಮುಚ್ಚಿಕೊಂಡು ಕುಳಿತದ್ದೇ ಆದರೆ ಲೋಕವು ಬದುಕಬಹುದೇ? ಎಂದಿಗೂ ಆಗದು. ಪರಮಾತ್ಮನು ಸರ್ವಾಂತರ್ಯಾಮಿ. ಸರ್ವಜ್ಞ. ರಾಜನ ಈ ಯೋಚನೆಯನ್ನೆಲ್ಲ ಮೊದಲೇ

ತಿಳಿದುಕೊಂಡು ಮರುದಿವಸ ಮುಂಚಿತವಾಗಿಯೇ ತನ್ನೊಬ್ಬ ಭಕ್ತನ ಸ್ವಪ್ನದಲ್ಲಿ ಕಾಣಿಸಿಕೊಂಡು ಈ ರೀತಿ ಅಪ್ಪಣೆ ಮಾಡಿದ್ದನು:—

"ನೀನು ಇವತ್ತಿಗೆ ಮೂರು ದಿವಸಕ್ಕೆ ಸರಿಯಾಗಿ ನೂರಾರು ಜನರಿಗೆ ಪಂಚಪಕ್ವಾನ್ನದ ಊಟವಾಗುವಷ್ಟು ಸೀಧಾ ಸಾಮಗ್ರಿಯನ್ನು ತೆಗೆದುಕೊಂಡು ಹೋಗಿ ಶ್ರೀಪಾದರಾಜರಿದ್ದಲ್ಲಿ ಮುಟ್ಟಿಸಬೇಕು." ಅಹಾ! ನೋಡಿದಿರೋ! ರಾಜನು ಇನ್ನೂ ನಾಳೆಯೋ ನಾಡದ್ದೋ ಇವರ ಪ್ರಾರಬ್ಧ ಪರೀಕ್ಷೆ ಮಾಡೋಣವೆಂದು ಆಲೋಚನೆ ಮಾಡುತ್ತಿದ್ದರೆ ನಮ್ಮ ಸ್ವಾಮಿಯು ಅವನಿಗಿಂತ ಮೊದಲೇ ಅದಕ್ಕೆ ಪ್ರತೀಕಾರವಾದ ಈ ಆಲೋಚನೆಯನ್ನು ಮಾಡಿಟ್ಟಿರುವನು. ಹೀಗೆ ಮುಂದಾಲೋಚನೆ ಮಾಡುವ ಸ್ವಾಮಿಯು ಕೈ ಹಿಡಿದಿದ್ದನೆಂದೇ ಪಾಂಡವರು ಜಯಶಾಲಿಗಳಾದರೆಂಬುದನ್ನೂ ಕೌರವರು ನಾಶವಾದರೆಂಬುದನ್ನೂ ಮಹಾಭಾರತದ ಕಥೆಯಲ್ಲಿ ಹೆಜ್ಜೆ ಹೆಜ್ಜೆಗೆ ಕಂಡುಕೊಳ್ಳಬಹುದು. ಆತನ ಸಹಾಯವೇ ಇಲ್ಲದಿದ್ದ ಪಕ್ಷದಲ್ಲಿ ಕೌರವ ಬಲದ ಮುಂದೆ ಪಾಂಡವರು ಒಂದು ಕ್ಷುದ್ರಕೀಟವಾಗಬಹುದಾಗಿತ್ತು. ಹೀಗಿದ್ದರೂ ಸ್ವಾಮಿಯ ಸಹಾಯವೊಂದಿದ್ದುದರಿಂದಲೇ ಅವರ ಸಂಕಲ್ಪಗಳೆಲ್ಲ ಕೊನೆಗಂಡವು. ಪ್ರತಿಜ್ಞೆಗಳು ಪೂರೈಸಿದವು. ಅಹಹಾ! ಆತನ ಭ್ರೂ ಸಂಜ್ಞಾಮಾತ್ರದಿಂದಲೇ ಸೃಷ್ಟಿ-ಸ್ಥಿತಿ-ಲಯಾದಿಗಳೂ ಆಗುತ್ತವೆಂದ ಮೇಲೆ ಎಲ್ಲಿಯೋ ಒಂದು ಕ್ಷುದ್ರವಾದ ಸಂಕಲ್ಪವು ನೆರವೇರುವುದೇನು ತಡ! ಇತ್ತ ಶ್ರೀಪಾದರಾಜರು ಯಾವ ದಿನ ಅರಣ್ಯಕ್ಕೆ ಕಳುಹಲ್ಪಟ್ಟರೋ ಅಂದೇ ಪ್ರಾತಃಕಾಲದಲ್ಲಿ ಪರಮಾತ್ಮನ ಅಪ್ಪಣೆಯಂತೆ ಆ ಭಕ್ತನು ಸೀಧಾ ಸಾಮಗ್ರಿಯನ್ನು ಚಕ್ಕಡಿಯ ಮೇಲೆ ಹೇರಿಕೊಂಡು ಶ್ರೀಪಾದರಾಜರಿದ್ದ ಊರಿಗೆ ಹೊರಟಿದ್ದನು. ದಾರಿಯು ಈಗ ಇವರಿದ್ದ ಅರಣ್ಯದ ಮೇಲೆಯೇ ಅರ್ಧ ಬದಿಗೆ ಸ್ವಲ್ಪ ದೂರವಾಗಿತ್ತು. ಜನರು ಓಡಾಡದಂಥ—ಯಾರಿಗೂ ಸುದ್ದಿ ಸಹ ಗೊತ್ತಾಗದಂಥ ಅರಣ್ಯಮಧ್ಯದಲ್ಲಿ ಬೇಕೆಂದೇ ರಾಜನು ಇವರನ್ನಿಳಿಸಿದ್ದನು. ಭಕ್ತನ ಚಕ್ಕಡಿಯು ನೆಟ್ಟಗೆ ದಾರಿಹಿಡಿದು ಬಂತು. ಆ ದಾರಿಯು ಮುಂದೆ ರಾಜನ ಊರಿಗೆ ಹೋಗಬೇಕಾದುದು. ಶ್ರೀಪಾದರಾಜರಾದರೋ ಅಲ್ಲಿಯೇ ಒಂದು ಮಗ್ಗುಲಿಗೆ ಅಡವಿಯಲ್ಲಿ ಕುಳಿತಿರುವರು. ಏನು ಗತಿ? ಭಕ್ತನಿಗೆ ಇದು ಹೇಗೆ ತಿಳಿಯಬೇಕು? ಶ್ರೀಪಾದರಾಜರಿಗೆ

ಆತನು ಸಾಮಾನನ್ನು ಹೇಗೆ ಮುಟ್ಟಿಸಬೇಕು? ವಾಚಕವೃಂದ! ಇವೆಲ್ಲವೂ ನಮ್ಮಂಥವರ ಯೋಚನೆಯಲ್ಲವೇ? ಇವೆಲ್ಲ ಪೂರ್ವಾಲೋಚನೆ ಮಾಡಿದ ಆ ಕಪಟನಾಟಕ ಸೂತ್ರಧಾರಿಯಾದ ಸ್ವಾಮಿಯು ಇದನ್ನು ನೆರವೇರಿಸಲಾರನೇ? ಆತನ ಲೀಲೆಯು ಚಮತ್ಕಾರವನ್ನು ಬಲ್ಲವರಾರು? ಹಾಗಾದರೆ ನಾವೀಗ ಆ ಭಕ್ತನ ಚಕ್ಕಡಿಯ ಹಿಂದೆಯೇ ಹೋಗೋಣ ನಡೆಯಿರಿ; ಅಂದರೆ ಸ್ವಾಮಿಯ ಲೀಲಾವಿನೋದವೂ ತಿಳಿಯುವದು. ಶ್ರೀಪಾದರಾಜರ ದರ್ಶನ ಲಾಭವೂ ಸಿಕ್ಕುವದು. ಮೇಲಾಗಿ ಪಂಚ-ಪಕ್ವಾನ್ನದ ಊಟವೂ ದೊರೆಯುವದು. ತಡವೇಕೆ? ನಡೆಯಿರಿ ಹಾಗಾದರೆ.

ನೆಟ್ಟಗೆ ದಾರೀ ಹಿಡಿದು ಹೋಗುತ್ತಿದ್ದ ಆ ಚಕ್ಕಡಿಯು ಹಿನ್ನಿಂದೊಮ್ಮೆ ಅರಣ್ಯದಲ್ಲಿ ಅಡ್ಡದಾರೀ ಹಿಡಿಯಿತು. ಭಕ್ತನು ನೋಡುತ್ತಾನೆ. ಅತ್ತಕಡೆಗೆ ದಾರಿಯಿಲ್ಲ; ಬಟ್ಟೆಯಿಲ್ಲ. ಎತ್ತುಗಳಾದರೋ ಅಸುಗೊಳ್ಳದೆ ಹಿಂದೇಸವನೆ ಓಡುತ್ತಲಿವೆ. ಸೇವಕರು ಎಷ್ಟೆಷ್ಟೋ ಪ್ರಯತ್ನ ಮಾಡಿ ನೋಡಿದರು. ಎತ್ತುಗಳು ಕೇಳಲಿಲ್ಲ. ಚಕ್ಕಡಿಯನ್ನು ದಾರಿಗೆ ತಿರುಗಿಸುವದಕ್ಕಾಗಲಿಲ್ಲ. ಕಡೆಗೆ ಬೇಸತ್ತು:—ಅವು ಹೋದ ಕಡೆಗೆ ಹೋಗಲಿ. ಎಲ್ಲಿಗೆ ಸಾಕಾಗಿ ನಿಂತುಕೊಳ್ಳುವವೋ ಅಲ್ಲಿಂದ ತಿರುಗಿಸೋಣವಂತೆ. ಎಂಬದಾಗಿ ಯೋಚಿಸುತ್ತ ಸುಮ್ಮನೆ ಕೈ ಬಿಟ್ಟುಬಿಟ್ಟರು. ಎತ್ತುಗಳು ನೆಟ್ಟಗೆ ಶ್ರೀಪಾದರಾಜರಿದ್ದ ಸ್ಥಳಕ್ಕೆ ಹೋಗಿ ನಿಂತುಕೊಂಡವು. ಪಾಪ! ಭಕ್ತನಿಗೆ ಇದೆಲ್ಲ ಏನು ಗೊತ್ತು? ಆ ಅರಣ್ಯಮಧ್ಯದಲ್ಲಿ ಜನರನ್ನು ಕಂಡ ಕೂಡಲೆ:—ಅಪ್ಪಗಳಿರಾ! ಎತ್ತುಗಳು ಅಸುಗೊಳ್ಳದೆ ನಮ್ಮನ್ನು ದಾರಿ ಬಿಡಿಸಿ ಈ ಅರಣ್ಯಮಧ್ಯಕ್ಕೇ ತಂದು ಬಿಟ್ಟವು. ಈಗಲೇ ಮಧ್ಯಾಹ್ನವಾಗುತ್ತ ಬಂತು. ನೀವಿಷ್ಟು ಸಹಾಯ ಮಾಡಿ ಬೇಗನೆ ನಮ್ಮನ್ನು ದಾರಿಗೆ ಹಚ್ಚಿರಿ. ಅಂದರೆ ಯತಿಗಳಿಗೆ ಭೋಜನ ಮಾಡಿಸಿದ ಪುಣ್ಯವು ನಿಮ್ಮ ಪದರಿನಲ್ಲಿ ಬೀಳುವದು, ಎಂದು ಅಂಗಲಾಚಿ ಬೇಡಿಕೊಳ್ಳಹತ್ತಿದನು. ಶ್ರೀಪಾದರಾಜರ ಶಿಷ್ಯರಿಗೆ ಆಶ್ಚರ್ಯವಾಯಿತು. “ಏನಪ್ಪಾ! ನೀನು ಯಾರು? ಎಲ್ಲಿ ಹೊರಟಿರುವಿ?” ಎಂದು ಕೇಳಿದರು. ಅದಕ್ಕೆ ಆತನು:—“ಅಯ್ಯಾ, ನನಗೀಗ ಅದನ್ನೆಲ್ಲ ಹೇಳುತ್ತ ನಿಲ್ಲುವಷ್ಟು ವೇಳೆಯಿರುವದಿಲ್ಲ. ಹೊತ್ತು ಏರಿ ಬಂತು. ಪರಮಾತ್ಮನ ಅನುಜ್ಞೆಯಾದಂತೆ

ಈ ಸಿದ್ಧಾಂತಾಮಗ್ರಿಯನ್ನು ಈಗಲೇ ಗುರುಗಳಾದ ಶ್ರೀಪಾದರಾಜರವರಿಗೆ ಮುಟ್ಟಿಸಬೇಕಾಗಿರುವದು. ಕಾರಣ ನನ್ನ ಪೂರ್ವೋತ್ತರವನ್ನೆಲ್ಲ ವಿಚಾರಿಸದೆ ಬೇಗನೆ ನನ್ನನ್ನು ದಾರಿಗೆ ಹಚ್ಚಿರಿ' ಅಂದನು. ಶಿಷ್ಯರ ಸಂತೋಷವನ್ನು ಹೇಳತೀರದು. ಅವರು:—ಎಲೈ ಭಕ್ತಾಗ್ರಣೀ! ನೀನು ಯಾವ ಯತಿವರರನ್ನು ಹುಡುಕಿಕೊಂಡು ಹೋಗುವದಕ್ಕಾಗಿ ಇಷ್ಟು ಕಷ್ಟಪಡುತ್ತಿರುವೆಯೋ, ಅವರೇ ಈಗ ನಿನ್ನ ಮುಂದೆ ಸಾಕ್ಷಾತ್ತಾಗಿ ಕುಳಿತಿರುವರು. ಅದೋ ನೋಡು. ಅವರೇ ಗುರುವರ್ಯರಾದ ಶ್ರೀಪಾದರಾಜರು. ಮಹಾನುಭಾವರು ಭಗವಂತನಿಗೆ ಪ್ರಿಯರಾದವರು! ಎಂದು ತೋರಿಸುತ್ತ ಆತನನ್ನು ಕರಕೊಂಡು ಹೋದರು. ಅಹಾ! ಆಗ ಭಕ್ತನಿಗಾದ ಆನಂದವನ್ನು ನಮ್ಮೀ ಶುಷ್ಕವಾದ ಲೇಖನಿಯು ಏನೆಂದು ವರ್ಣಿಸೀತು? ಆತನಿಗೆ ಪ್ರತ್ಯಕ್ಷ ದೇವರನ್ನೇ ಕಂಡಂತಾಯಿತು. ಕಣ್ಣಲ್ಲಿ ಆನಂದಾಶ್ರುಗಳು ಸುರಿಯಹತ್ತಿದವು. ಕುತ್ತಿಗೆಯ ಶಿರಗಳು ಉಬ್ಬಿಹೋದವು. ಹೋದವನೇ ಸಾಷ್ಟಾಂಗವಾಗಿ ವಂದಿಸಿದನು. ಶ್ರೀಪಾದರಾಜರು ವಿಚಾರಿಸಿದರು. ತನ್ನ ಎಲ್ಲ ಸಂಗತಿಯನ್ನೂ ನಿವೇದಿಸಿದನು. ಮುಗ್ಧರಾಗಿ ಹೋದರು. ಕ್ಷಣಹೊತ್ತು ಕಣ್ಣುಮುಚ್ಚಿಕೊಂಡು ಭಗವಂತನನ್ನು ಪರಿಪರಿಯಿಂದ ಕೊಂಡಾಡಿದರು. ಹೇ ಸ್ವಾಮಿ! ಭಗವಂತಾ! ಸರ್ವಲೋಕೇಶ್ವರನೂ, ಸೃಷ್ಟಿ-ಸ್ಥಿತಿ-ಲಯ ಕರ್ತನೂ ಆದಂಥ ನೀನು ಕೇವಲ ಕ್ಷುದ್ರಾದ್ರಪಿಕ್ಷುದ್ರನಾದ-ಪಾಮರನಾದ ನನ್ನ ದೆಶೆಯಿಂದ ಎಷ್ಟು ಕಷ್ಟಬಟ್ಟೆಯಲ್ಲ? ಅಯ್ಯೋ! ಪಾಪೀಯಸಿಯಾದ ನಾನು ಈ ಕೆಟ್ಟ ಹೊಟ್ಟೆಯಗೋಸುಗ ನಿನಗೆ ಇಷ್ಟು ಶ್ರಮಕೊಡಬೇಕಾಯಿತೇ? ಛೀ! ನಾನೆಂತಹ ಪಾಪಿ? ಎಂತಹ ಕರುಣಾಶೂನ್ಯ? ಇನ್ನೆಂತಹ ಕೃತಘ್ನ? ನನ್ನೀ ಜನ್ಮಕ್ಕೆ ಧಿಕ್ಕಾರವಿರಲಿ. ಭೋ! ಅನಾಥರಕ್ಷಕಾ! ಭಕ್ತಾಭಿಮಾನೀ! ದೀನದಯಾಲೋ!

ಪಾಪೋಽಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಃ||
ತ್ರಾಹಿಮಾಂ ಕೃಪಯಾ ಕೃಷ್ಣ ಶರಣಾಗತ ವತ್ಸಲ||

ನಾನು ಅತ್ಯಂತ ಪಾಪಕರ್ಮಿ. ಪಾಪದಿಂದಲೇ ಹುಟ್ಟಿದವನು. ನನ್ನನ್ನು ಉದ್ಧಾರಮಾಡು, ಉದ್ಧಾರಮಾಡು! ಹೀಗೆಂದು ಬೇಡಿಕೊಂಡು ಕಂಣಾ ತುಂಬಾ ನೀರು ತಂದರು. ಶ್ರೀಗಳವರ ಈ ಭಕ್ತ್ಯಾತಿಶಯವನ್ನು ನೋಡಿ, ಶಿಷ್ಯರ ಕಣ್ಣುಗಳೂ ನೀರಿನಿಂಗ ಕಂಬಿದವು ಭಕ್ತನಂತೂ ಮೈಮರೆತು

ಹೋಗಿದ್ದನು. ತನ್ನ ಎತ್ತುಗಳು ತನಗೆ ಅರುಗೊಳ್ಳದೆ ಹೀಗೆ ಬಂದುದಕ್ಕೆ ಕಾರಣವೇನೆಂಬುದು ತಿಳಿಯುದಂತಾಯಿತು. ಅವನ ಸಂತೋಷಕ್ಕೆ ಪಾರವೇ ಇಲ್ಲ. ಶ್ರೀಪಾದರಾಜರು ಸ್ವಾಮಿಯನ್ನು ಮನದಣಿ ಕೊಂಡಾಡಿ ನೀರು-ನೆರಳಿಲ್ಲದ ಅರಣ್ಯದಲ್ಲಿಯೇ ದಿವ್ಯವಾದ ಒಂದು ಸರಸ್ಸನ್ನು ನಿರ್ಮಿಸಿದರು. ಅಲ್ಲಿಂದೇನು ತಡ! ಅರವತ್ತುನಾಲ್ಕು ಬಗೆಯ ಭಕ್ಷ್ಯಭೋಜ್ಯಗಳೂ, ಶಾಕಪಾಕಾದಿಗಳೂ ತಯಾರಿಸಲ್ಪಟ್ಟವು. ಶ್ರೀ ಗೋಪಾಲಕೃಷ್ಣನ ಪೂಜೆ ನಡೆಯಿತು. ಊಟ-ಉಪಚಾರಾದಿಗಳೂ ಮುಗಿದವು. 'ಶೆಟ್ಟಿ ಇಳಿದಲ್ಲೇ ಪಟ್ಟಣ' ಎಂಬ ಮಾತು ಸುಳ್ಳಲ್ಲ ಭೋವಾಚಕವೃಂದ! ಶ್ರೀಪಾದರಾಯರ ಸುಖಪ್ರಾರಬ್ಧವು ಹೇಗಿದೆ ನೋಡಿದಿರೇನು? ನಾವು ಮೊದಲೇ ಹೇಳಲಿಲ್ಲವೇ? ಭಕ್ತರ ಕೈವಾರಿಯಾದ ಭಗವಂತನೇ ಅವರ ಮೈನೆಳಲಿನಂತೆ ಸಂಚರಿಸುತ್ತಾ ಕಾಪಾಡುತ್ತಿರುವಾಗ, ಅವರು ಊರಲ್ಲಿದ್ದರೇನು? ನಟ್ಟಡವಿಯಲ್ಲಿದ್ದರೇನು? ಹಿಂದಕ್ಕೆ ಭಕ್ತಾಗ್ರೇಸರರಾದ ಪಾಂಡವರು ಅಡವಿಯಲ್ಲಿರುತ್ತಿರಲು, ಅದೂ ಮಧ್ಯರಾತ್ರಿಯಲ್ಲಿ, ಕಾಲದುಪಕ್ಕೆ ಅರವತ್ತು ಸಾವಿರ ಶಿಷ್ಯರೊಡಗೂಡಿ ಬಂದಂಥ ದುರ್ವಾಸಋಷಿಗಳಿಗೆ ಇಚ್ಛಾಭೋಜನ ಮಾಡಿಸಿ ತೃಪ್ತಿಪಡಿಸಿ ತೇಗಿಸಿ ಬಿಡಲಿಲ್ಲವೆ? ಇಂಥಾ ಸ್ವಾಮಿಗೆ ಇದು ಯಾವ ದೊಡ್ಡ ಮಾತು! ಶ್ರೀಪಾದರಾಯರು ಅರಣ್ಯದಲ್ಲಿದ್ದರೂ ಸ್ವಾಮಿಯ ಅನುಗ್ರಹದಿಂದ ಅವರಿಗೆ ಅಮೃತಾನ್ನವೇ ಸಿಕ್ಕಿತು.

ಈ ವಿಷಯವನ್ನು ಶ್ರೀ ನಿಧಿತೀರ್ಥರು ಹೇಗೆ ಬಣ್ಣಿಸಿರುತ್ತಾರೆ ನೋಡಿರಿ.

"ನಾನಾಶಾಕ ಸುಭಕ್ಷ್ಯ ಪಾಯಸ ಘೃತ ಪ್ರಾಜ್ಯಾನ್ನ ಭುಕ್ತ್ವಾಜನೇ |
ನಿಂದಾಂ ಕುರ್ವತಿ ಕಾನನಂ ಗತವತೇ ಯಸ್ಮೈದದೌ ಶ್ರೀಪತಿಃ ||
ಮೃಷ್ಟಾನ್ನಂ ಸಘೃತಂ ಪಯೋದಧಿಯುತಂ ಸೋಪಸ್ಕರಂ ಕಾನನೇ |
ಗೋಪೀನಾಥ ಪದಾಬ್ಜಸಕ್ತಸುಮನಾ ಭೂಯಾತ್ಸನಃ ಶ್ರೇಯಸೆ || "

(ಶ್ರೀಪಾದರಾಜಾಷ್ಟಕ)

ಇತ್ತ ಮಗನನ್ನು ಕಳಕೊಂಡು ಶೋಕಾಕುಲನಾಗಿದ್ದ ಮಹಾರಾಜನು ಶ್ರೀರಘುನಾಥತೀರ್ಥರಿಗೆ ಮೊರೆ ಹೊಕ್ಕು ತನ್ನ ಒಡಲಿನ ದುಃಖವನ್ನು ನಿವೇದಿಸಿದನು. ರಾಜನ ಸಂಕಟವನ್ನು ನೋಡಿ ಅವರ ಅಂತಃ

ಕರುಣವು ಕರಗಿತು. ಆಗ ಅವರು:—ಎಲೈ ಮಹಾರಾಜಾ! ನೀನು ನಮ್ಮ ಪ್ರಾರಬ್ಧವನ್ನು ಪರೀಕ್ಷಿಸುವ ನಿಮಿತ್ತವಾಗಿ ಇಲ್ಲದ ಆಟವನ್ನು ಹೂಡಿ, ಮಹನ್ನೀಯರಾದ ಶ್ರೀಪಾದರಾಯರನ್ನು ಅರಣ್ಯದಲ್ಲಿ ತಪಿಸುವಂತೆ ಮಾಡಿದಿ,

ಶುಷ್ಕಚರ್ಮಾಣಿ ವಿಶ್ವಾಸೋ ದಹತಿ ಪಂಚಲೋಹಕಂ ||
ಸಾಧುಸಜ್ಜನ ಸಂತಾಪಂಕಿಮಾಶ್ಚರ್ಯಂ ಕುಲಕ್ಷಯಂ ||

ಎಂಬಂತೆ ಆ ಮಹಾತ್ಮರ ಹಿಂದು ನಿಟ್ಟುಸಿರೇ ನಿನ್ನ ವಂಶವನ್ನು ಕಮರಿಸಿ ಬಿಟ್ಟಿರುವದು; ಕಾರಣ ಈಗಲೆ ಹೋಗಿ ಶ್ರೀಪಾದರಾಯರನ್ನು ಪ್ರಾರ್ಥಿಸು. ಅವರ ಅನುಗ್ರಹದಿಂದ ನಿನ್ನ ಮಗನು ಜೀವಿಸುವನು. ಹೀಗೆಂದು ಹೇಳಿದರು. ಕೂಡಲೆ ಮಹಾರಾಜನು ಸಕಲ ರಾಜವೈಭವದೊಂದಿಗೆ ಪಲ್ಲಕ್ಕಿಯನ್ನು ಕೊಟ್ಟುಕಳಿಸಿ ಶ್ರೀಪಾದರಾಯರನ್ನು ಕರಿಸಿಕೊಂಡು:—ಭೋ ಸ್ವಾಮೀ! ಗುರುವರ್ಯಾ! ಕೇವಲ ಪಾಮರನಾದ ನಾನು ತಮ್ಮಂಥ ಮಹಾತ್ಮರಲ್ಲಿ ತಿಳಿಯದೆ ಮಾಡಿದ ಅಪರಾಧವನ್ನು ಕ್ಷಮಿಸಿ ಉದ್ಧಾರಮಾಡಬೇಕು. ಸಾಕ್ಷಾತ್ ಸ್ವಾಮಿಯೇ ತಮ್ಮ ಕೈವಾರಿಯಾಗಿರುವಾಗ ಕ್ಷುದ್ರ ಕೀಟವಾದ ನನ್ನಿಂದ ತಮ್ಮ ಅದೃಷ್ಟವನ್ನು ಬದಲಾಯಿಸುವದಕ್ಕಾದೀತೇ? ಇದನ್ನು ತಿಳಿಯದೆ ಸನ್ನಿಧಿಯಲ್ಲಿ ಮಹಾಪರಾಧವನ್ನು ಮಾಡಿದೆನು. ಇಗೋ ತಮಗೆ ಶಿರಗೊಡ್ಡಿ ಪ್ರಾರ್ಥಿಸುತ್ತಿದ್ದೇನೆ. ಪುತ್ರಭಿಕ್ಷವನ್ನು ಕೊಟ್ಟು ಕಾಪಾಡಬೇಕು-ಕಾಪಾಡಬೇಕು.

ಹೀಗೆ ಹಲುಬಿ ಹಂಬಲಿಸುತ್ತಿರುವ ಮಹಾರಾಜನನ್ನೂ ಆತನ ಪರಿವಾರವನ್ನೂ ಕಂಡು ಶ್ರೀಪಾದರಾಯರಿಗೆ ಕಣ್ಣು ತುಂಬಾ ನೀರು ಬಂದವು. ಅವರು ತತ್‍ಕ್ಷಣ ರಾಜನು ಮಾಡಿದ ಅಪರಾಧವನ್ನೆಲ್ಲ ಮರೆತು ರಘುನಾಥತೀರ್ಥರ ಅನುಮತಿಯಿಂದ ಸ್ವಾಮಿಯನ್ನು ಮನಸಾ ಧ್ಯಾನಿಸಿ ಕಮಂಡಲೋದಕದಿಂದ ಪ್ರೋಕ್ಷಣೆ ಮಾಡಿ ರಾಜನ ಮಗನನ್ನು ಎಬ್ಬಿಸಿದರು. ಸತ್ಪುರುಷರ ಅಂತಃಕರಣವೇ ಅಷ್ಟು ಕೋಮಲವಾದದ್ದು. ಆಗ ರಾಜನಿಗೂ ರಾಜಪರಿವಾರಕ್ಕೂ ಆದ ಸಂತೋಷವನ್ನು ಎಷ್ಟೆಂದು ಹೇಳೋಣ! ಅವರು ಶ್ರೀಗಳವರನ್ನು ಬಗೆಬಗೆಯಿಂದ ಕೊಂಡಾಡಿದರು. ಮನ್ನಿಸಿದರು ಸತ್ಕಾರ ಮಾಡಿದರು. ಅನೇಕ ಭೂಮಿ ಕಾಣಿಕೆಗಳನ್ನು ದಾನವಾಗಿ ಹಾಕಿ ಕೊಟ್ಟರು.

ಅಲ್ಪಜ್ಞರೂ ಅಲ್ಪಮತಿಗಳೂ ಆದ ನಮ್ಮಂಥವರು ದೊಡ್ಡವರನ್ನು ಪರೀಕ್ಷಿಸುವದಕ್ಕೆ ಸರ್ವಥಾ ಹೋಗಬಾರದು. ಅದು ಎಂದೆಂದಿಗೂ ಶುಭವನ್ನು ಕೊಡಲಾರದು. ಅದರಲ್ಲಿಯೂ ಭಗವಂತನಿಗೆ ಪ್ರಿಯರಾದ ಭಗವದ್ಭಕ್ತರನ್ನಂತೂ ಕೇಳಬೇಕೇ? ಅವರು ಏನು ಮಾಡ್ಯಾರು, ಏನು ಮಾಡಲಿಕ್ಕಿಲ್ಲೆಂಬ ನಿಯಮವೇ ಇಲ್ಲ. ಅವರಿಗೆ ಇಂಥದೊಂದು ಕಾರ್ಯವು ಅಸಾಧ್ಯವೆಂದು ಎಂದೂ ತೋರದು. ಅಘಟಿತಘಟನಾಶಕ್ತಿಯುಳ್ಳ ಪರಮಾತ್ಮನೇ ಅವರ ಬೆಂಬಲಕ್ಕಿರುವಾಗ ಯಾವುದು ತಾನೇ ಅಸಾಧ್ಯವಾದೀತು? ಅಂತಲೇ ಶ್ರೀ ಪುರಂದರದಾಸರ ಮುಖ್ಯರಾದ ಗುರುರಾಯರು ಇಂಥವರ ವಿಷಯದಲ್ಲಿ ಹೀಗೆ ಹೇಳಿಕೊಂಡಿರುತ್ತಾರೆ.

"ನೀರು ಕೂಡಿದ ಹಾಲ ನೀರೆನ್ನಬಹುದೇ |
ನೀರೊಳ್ ಪುಟ್ಟಿದ ಮುತ್ತು ನೀರಹುದೇ ||
ಅರಿದಭಾಂಡವು ಮೃತ್ತಿಕೆಯಹುದೆ ನಮ್ಮ |
ಶೌರಿಯ ಶರಣರ ನರರೆನ್ನಬಹುದೇ" ||
ನೋಡಿದ್ಯಾ ಕಲ್ಪಭೂರುಹರೆನಿಪರ |
ನಾಡೊಳು ಶ್ರೀ ಹರಿದಾಸರು ನರರೆ || ಪ ||
(ಗುರು ಪುರಂದರದಾಸರು)

---

## ೭ ಅಗ್ನಿಯನ್ನು ಅಡಗಿಸಿದ್ದು.

ಮುಂದೆ ರಘುನಾಥತೀರ್ಥರನ್ನು ಕೂಡಿಕೊಂಡು ಶ್ರೀಪಾದರಾಜರು ಉತ್ತರದ ಕಡೆಗೆ ತಿರುಗಲು, ಮಾರ್ಗಮಧ್ಯದಲ್ಲಿ ಯಾವನೋ ಒಬ್ಬ ಅರಸನು ಇವರನ್ನು ಅರಮನೆಗೆ ಕರೆದುಕೊಂಡು ಹೋಗಿ ಸತ್ಕರಿಸಿ ಭಿಕ್ಷೆ ಮಾಡಿಸಬೇಕೆಂದು ಯೋಚಿಸಿದನು.

ಅನ್ನದಾನಾತ್ ಪರಂ ನಾಸ್ತಿ | ಎಂಬಂತೆ—

ಸಾಮಾನ್ಯವಾದ ಅನ್ನದಾನವೇ ಅತ್ಯದ್ಭುತ ಫಲವನ್ನು ಕೊಡುತ್ತಿರುವಾಗ ಮಹನ್ನೀಯರಾದ ಇಬ್ಬರು ತಪಸ್ವಿಗಳಾದ ಯತಿಗಳನ್ನು ಭಕ್ತಿಯಿಂದ ತೃಪ್ತಿಬಡಿಸುವದರಿಂದಂತೂ ಇಷ್ಟಿಷ್ಟು ತಾನೇ ಪುಣ್ಯಪ್ರಾಪ್ತಿಯಾಗಬಹುದೆಂಬದನ್ನು ಭಾವಿಕರಾದ ವಾಚಕರೇ ಊಹಿಸಬೇಕಲ್ಲದೆ,

ಬರೆದು ತೋರಿಸಲು ನಮ್ಮಿಂದ ಸಾಧ್ಯವೇ ಇಲ್ಲ. 'ಏಕಂ ಸಂತಂ ಬಹುಧಾ ಕಲ್ಪಯಂತಿ' ಎಂದ ಹಾಗೆ ಒಬ್ಬ ಸತ್ಪುರುಷರನ್ನು ತೃಪ್ತಿಬಡಿಸುವದೇ ಕಲ್ಪಾಂತಕೋಟಿ ಪುಣ್ಯಸಾಧನಕ್ಕೆ ಕಾರಣವಾಗಿರುವದು. ಇದೇ ಕಾರಣ ದಿಂದ ಒಮ್ಮೆ ಶ್ರೀವ್ಯಾಸರಾಯರಿಗೆ ಲಕ್ಷಬ್ರಾಹ್ಮಣ ಭೋಜನ ಮಾಡಿಸ ಬೇಕೆಂದು ಸ್ವಪ್ನದಲ್ಲಿ ಸ್ವಾಮಿಯ ಅಪ್ಪಣೆಯಾಗಲು, ಅವರು ಮಹಾನು ಭಾವರಾದ ಶ್ರೀಪುರಂದರದಾಸರನ್ನು ಕರೆದು ಭೋಜನ ಮಾಡಿಸಿಬಿಟ್ಟರಂತೆ!

ಅರಸನಾದರೂ ಹೀಗೇಯೇ ಆಲೋಚಿಸಿ ಇಬ್ಬರು ಯತಿಗಳನ್ನು ಕರೆ ದೊಯ್ದನು. ಆದರೇನು? ಅದೆಂತಹ ವಿಷಮವ್ಯಾಳ್ಯವೋ ಅಥವಾ ಅರ ಸನ ದುರದೃಷ್ಟವೋ ತಿಳಿಯದು. ಶ್ರೀ ರಘುನಾಥತೀರ್ಥರಿಗೆ ಪಾದಪ್ರಕ್ಷಾ ಲನ ಮಾಡಿ, ಆ ಜಲವನ್ನು ಶಿರಸ್ಸಿನಲ್ಲಿ ಪ್ರೋಕ್ಷಿಸಿಕೊಂಡು ಶ್ರೀಪಾದರಾ ಜರ ಪಾದಪ್ರಕ್ಷಾಲನಕ್ಕೆ ಕುಳಿತ ಅರಸನಿಗೆ ಅವರ ಲಂಬಕರ್ಣಾದಿಗ ಳನ್ನು ನೋಡಿ ಒಮ್ಮಿಂದೊಮ್ಮೆ ನಗೆ ಬಂತು ಜೋಳ್ಳನೆ ನಕ್ಕುಬಿಟ್ಟನು. ಇಷ್ಟೇ ಅಲ್ಲ; ಅಶ್ವದಂತೆ ಉದ್ದ ಕಿವಿಗಳಿರ ವವೆಂದೂ, ಇಂಥವರು ಪೂಜಾ ಯೋಗ್ಯರಲ್ಲವೆಂದೂ ತಿರಸ್ಕರಿಸಿ ಮಾತನಾಡಿದನು. ಹಿಂದಕ್ಕೆ ಪಾಂಡವರ ರಾಜಸೂಯ ಯಾಗದ ಕಾಲದಲ್ಲಿ ಅಗ್ರಪೂಜೆಗೆ ಬಂದ ಶ್ರೀಕೃಷ್ಣಮೂರ್ತಿ ಯನ್ನು ಶಿಶುಪಾಲನು ನಿಂದೆ ಮಾಡಿದಂತಾಯಿತು.

ನೋಡಿದಿರಾ! ಶ್ರೀಪಾದರಾಯರ ಯೋಗ್ಯತೆಯೇನು? ಈ ಹುಲ್ಲು ಮಾನವನಾದ ಅರಸನ ಯೋಗ್ಯತೆಯೇನು? ಇಂಥವನು ಸಾಕ್ಷಾತ್ತು ದೇವತಾಸ್ವರೂಪರಾದಂಥವರನ್ನು ನಿಂದಿಸಬಹುದೇ? ಅರಸನು ಇನ್ನೂ ಹುಡುಗನಾದ್ದರಿಂದ ಬಾಲಬುದ್ಧಿಗೆ ತಕ್ಕಂತೆ ಆಚರಿಸಿದನು; ಆದರೆ ಶ್ರೀ ಪಾದರಾಯರಿಗೆ ಇದರಿಂದೇನು ಹಿಗ್ಗೂ ಇಲ್ಲ. ಕುಗ್ಗೂ ಇಲ್ಲ. ಅವರು ಸುಮ್ಮನೆ ಹೊರಟುಹೋದರು. ಸಾಧು ಸಂತರ ಮಾತೇ ಇಷ್ಟು. ಅವರು ತಮಗಾಗುವ ಯಾವದೊಂದು ವಿಷಯವನ್ನೂ ಪರಮಾತ್ಮನಿಗೇ ಅರ್ಪಣ ಮಾಡಿಬಿಡುವರು. ಸಕಲವೂ ಭಗವಂತನ ಲೀಲಾ ವಿನೋದವೆಂದೇ ಅವರ ಭಾವನೆ. ನಮ್ಮಂತೆ ಪ್ರತಿಯೊಂದಕ್ಕೆ ನಾನು ಮಾಡಿದೆ; ನನ್ನಿಂದ ಈ ಕೆಲಸವಾಯಿತು; ನಾನಿಲ್ಲದಿದ್ದರೆ ಆಗುತ್ತಿರಲಿಲ್ಲ; ಎಂಬದಾಗಿ ಅಹಂ ಭಾವವನ್ನು ಮೆರೆಯಿಸುವದೂ, ಹೇವ-ಪಂಥಗಳಿಂದ ಸೇಡು ತೀರಿಸಿಕೊಳ್ಳು ವದೂ ಅವರ ಸ್ವಭಾವವೇ ಅಲ್ಲ; ಅಂದಮೇಲೆ ಇಂಥವರಿಗಾದ ಅಪಮಾನ

ವನ್ನು ಆ ಭಕ್ತಾಧೀನನಾದ ಭಗವಂತನು ಹೇಗೆ ತಾಳಿಕೊಂಡಾನು? ಸ್ವಂತ ತನಗಾದ ಅಪಮಾನವನ್ನು ಹಿಂದುವೇಳೆ ತುಸ ತಡೆದರೂ ತಡೆದಾನು. ಭಕ್ತರ ಅಗೌರವನವನ್ನು ಮಾತ್ರ ಕ್ಷಣಹೊತ್ತು ತಡೆಯಲಾರನು ಹಿಂದಕ್ಕೆ ಪರಮಾತ್ಮನ ಪಂಚಪ್ರಾಣದಂತಿರುವ ಪಾಂಡವರನ್ನು ಅವಮಾನಗೊಳಿಸಬೇಕೆಂದು ಬುದ್ಧ್ಯಾ ಯೋಚನೆ ಮಾಡಿ ಬಂದ ದುರ್ಯೋಧನನನ್ನು ಗಂಧರ್ವರಿಂದ ಹೆಡೆಮುರಿಗೆ ಕಟ್ಟಿಸಿ ಹೆಂಗಸರಿಂದ ಹಿದೆಯಿಸಲಿಲ್ಲವೇ?

ಅಂತೆಯೇ ದಾಸರಾಯರು—

'ತಾಳಿತನ್ನವರಲ್ಲಿ ಮಾಡುವ ಹೇಳನೆವ ಹೆದ್ದೈವ ವಿದುರನ |
ಯಾಲಯದಿ ಪಾಲುಂಡು ಕುರುಪನ ಮಾನವನೆ ಕೊಂಡಾ' ||

(ಹರಿಕಥಾಮೃತಸಾರ)

ಹೀಗೆ ಹಿಕ್ಕಣಿಸಿದ್ದಾರೆ.

ಶ್ರೀಪಾದರಾಜರು ಹೊರಗೆ ಹೋದದ್ದೊಂದೇ ತಡ. ಹಿಮ್ಮಿಂದೊಮ್ಮೆ ಅರಮನೆಗೆ ಬೆಂಕಿ ಹತ್ತಿತು. ಚಟ್ಟ ಮೇಲೆ ಬುದ್ಧಿ ಬಂತೆಂಬಂತೆ ಅರಸನು ಕಕ್ಕಾವಿಕ್ಕಿಯಾದನು. ಶ್ರೀರಘುನಾಥತೀರ್ಥರ ಚರಣಕಮಲದಲ್ಲಿ ಬಿದ್ದು ಹೊರಳಾಡಹತ್ತಿದನು. ಆಗ ರಘುನಾಥತೀರ್ಥರು:—"ಎಲೈ ನೃಪವರೋತ್ತಮಾ! ನೀನು ಶುದ್ಧ ಮೂಢನಂತೆ ಅವಿವೇಕ ಕೆಲಸ ಮಾಡಿದಿ. ಶ್ರೀಪಾದರಾಯರಂಥ ಮಹಾತ್ಮರನ್ನು ಹೀಗೆ ಜರೆಯಬಹುದೇ? ಭಗವಂತನು ಭಕ್ತಾಧೀನನಾದ್ದರಿಂದ ಆತನು ತನ್ನ ಭಕ್ತರ ಅಪಮಾನವನ್ನು ಎಂದಿಗೂ ಸೈರಿಸಲಾರನು. ಶ್ರೀಪಾದರಾಯರು ಹಿಂದುವೇಳೆ ಸಿಟ್ಟು ಮಾಡದೆ ಸುಮ್ಮನೆ ಇದ್ದರೂ ಅವರ ಅಭಿಮಾನಿಯಾದ ಸ್ವಾಮಿಯು ನಿನ್ನನ್ನೂ, ನಿನ್ನ ವಂಶವನ್ನೂ ಈಗಲೇ ಸುಟ್ಟು ಬೂದಿ ಮಾಡಿ ಬಿಡುವನು. ಹೋಗು. ಶೀಘ್ರವಾಗಿ ಶ್ರೀಪಾದರಾಯರ ಅನುಗ್ರಹವನ್ನು ಸಂಪಾದಿಸು. ಇಲ್ಲದೆ ಹೋದಲ್ಲಿ ಚಕ್ರವು ಬೆನ್ನಟ್ಟ ಬಂದ ದುರ್ವಾಸಋಷಿಯ ಗತಿಯಾದೀತು." ಹೀಗೆಂದು ಉಪದೇಶ ಮಾಡಿದರು.

ಅರಸನಿಗಾಗ ನಿಚ್ಚಳವಾಗಿ ಕಣ್ಣು ತೆರೆದವು. ಓಡಿ ಬಂದವನೇ ಶ್ರೀಪಾದರಾಯರ ಚರಣವನ್ನು ಗಟ್ಟಿಯಾಗಿ ಹಿಡಿದುಕೊಂಡು:— ಭೋ ಸ್ವಾಮೀ! ಗುರುವರಾ, ನಾನು ಬಾಲಬುದ್ಧಿಗನುಸರಿಸಿಯೋ, ಮದಾಂಧತನದಿಂದಲೋ ಸನ್ನಿಧಿಯಲ್ಲಿ ಮಹಾಪರಾಧವನ್ನು ಮಾಡಿ ಗುರುದ್ರೋಹ

ವನ್ನು ಕಟ್ಟಿಕೊಂಡೆನು. ಆ ದ್ರೋಹವು ಈಗ ನನ್ನ ವಂಶವನ್ನೇ ಸುಟ್ಟು ಸೂರೆಗೊಳ್ಳಲಿಕ್ಕೆ ಕುಳಿತಿರುವದು. ದಯಮಾಡಿ ಇದರಿಂದ ನನ್ನನ್ನು ರಕ್ಷಿಸಬೇಕು-ರಕ್ಷಿಸಬೇಕು, ಎಂದು ಅಂಗಲಾಚಿ ಬೇಡಿಕೊಳ್ಳ ಹತ್ತಿದನು ಶ್ರೀಪಾದರಾಯರಿಗೆ ಕರುಣ ಬಂದಿತು. ಅವರು ಕೂಡಲೆ ರಘುನಾಥತೀರ್ಥರ ಅನುಮತಿಯಿಂದ ಅರಮನೆಗೆ ಹೋಗಿ ಕಮಂಡಲೋದಕವನ್ನು ಪ್ರೋಕ್ಷಿಸಲು, ಉರಿಯೆಲ್ಲವೂ ಮಾಯವಾಗಿ ಅರಮನೆಯು ಮೊದಲಿನಂತಾಯಿತು.

ಇದನ್ನೇ ಶ್ರೀನಿಧಿತೀರ್ಥರು ಹೀಗೆ ಬಣ್ಣಿಸಿರುವರು:—

"ಪಾತುಃ ಶ್ರೀಪಾದರಾಜಃ ಸ್ವಬಿಬಿರ ರಘುನಾಥಾರ್ಯ ಯುಕ್ತಃ ಕದಾಚಿ|
ದ್ಗಂಗಾಸ್ನಿನಾಯಗಚ್ಛನ್ ಪಥಿನೃಪಸದನಂ ಪ್ರಾಪ್ಯಭೈಕ್ಷ್ಯಂ ಯಯಾಚಿ||
ಪಾದಪ್ರಕ್ಷಾಲನಾರ್ಥಂ ಸ್ಥಿತವತಿಯತಿಪೆಭರ್ತ್ಸನಾದಸ್ಯಕೋಪಾ |
ದ್ಗೇಹೇದಗ್ಧೇತಿನಮ್ರಂ ಪದಯುಗಲಗತಂ ಯೋಽರರಕ್ಷಾವನೀಶಂ||"

(ಶ್ರೀಪಾದರಾಜಾಷ್ಟಕ.)

## ೭ ವಾದಿ ಜಯ.

(ಗೃಹಸ್ಥಾಶ್ರಮಿಗಳನ್ನು ಯತಿಗಳನ್ನಾಗಿ ಮಾಡಿದ್ದು.)

ಶ್ರೀಪಾದರಾಯರು ಒಮ್ಮೆ ಕಾಶಿಗೆ ಹೋದರು. ಕಾಶಿಯು ಎಂದೆಂದಿಗೂ ನಮ್ಮ ಸಂಸ್ಕೃತಸಾಹಿತ್ಯ ಭಾಂಡಾರಕ್ಕೆ ಖನಿಯಂತಿರುವದು. ಅಲ್ಲಿ ದೊಡ್ಡ ದೊಡ್ಡ ವಿದ್ವಾಂಸರೂ, ಮಹಾಮಹೋಪಾಧ್ಯಾಯರೂ ಹೇರಳವಾಗಿರುವರು. ಕೇವಲ ಮೃತಭಾಷೆಯೆನಿಸಿಕೊಂಡಂಥ ಈ ಕಲಿಕಾಲದಲ್ಲೇನೇ ಸಂಸ್ಕೃತ ವಿದ್ಯಾಭ್ಯಾಸಿಸತಕ್ಕವರು ಕಾಶಿಗೆ ಹೋಗಿ ಪಂಡಿತರಾಗಿ ಬರುತ್ತಿರುವರೆಂದಮೇಲೆ, ಈಗ ನಾನೂರು ವರ್ಷದ ಹಿಂದಿನ ಕಾಲದಲ್ಲಂತೂ ಎಷ್ಟು ಉನ್ನತಸ್ಥಿತಿಯಲ್ಲಿದ್ದಿರಬೇಕೆಂಬದನ್ನು ವಾಚಕರೇ ಊಹಿಸಿಕೊಳ್ಳಬಹುದು. ನಮ್ಮ ಶ್ರೀಪಾದರಾಯರು ಕಾಶಿಗೆ ಹೋದ ಕಾಲಕ್ಕೆ ಅಲ್ಲಿ ಮಹತ್ತರವಾದ ಪ್ರಚಂಡಪಂಡಿತಪ್ರಕಾಂಡರು ಬೇಕಾದಷ್ಟು ಜನರಿದ್ದರು. ಅವರು ಇಬ್ಬಿಬ್ಬರೂ ಷಟ್‌ಶಾಸ್ತ್ರ ನಿರತರು. ವೇದ-

ವೇದಾಂಗ ನಿಪುಣರು. ಹೊತ್ತು ಬಿದ್ದರೆ ಕಪಿಲ, ಗೌತಮ, ಕಣಾದ, ಪತಂಜಲ, ಪಾಣಿನ್ಯಾದಿಗಳನ್ನೇ ತಾಸೆರಡು ತಾಸು ತರುಬಿ ನಿಲ್ಲಿಸತಕ್ಕಂಥವರು. ಇಂಥ ಉದ್ದಾಮ ಪಂಡಿತರು ಯತಿಗಳಾದ ಶ್ರೀಪಾದರಾಯರನ್ನು ಲಕ್ಷಿಸಬಹುದೆ? ಆದರಲ್ಲಿಯೂ ಇವರು ಕರ್ಣಾಟಕ ದೇಶದವರು ಕರ್ಣಾಟಕ ದೇಶದ ಪಂಡಿತರೆಂದರೆ ಕಾಶಿಯ ಪಂಡಿತರಿಗೆ ಕಣ್ಣಲ್ಲೇ ಕಾಣುತ್ತಿರಲಿಲ್ಲ. ತಮಗೆ ಇವರೊಂದು ಕ್ಷುದ್ರಕೀಟವೆಂಬ ಅವರ ತಿಳುವಳಿಕೆ. ಅಷ್ಟೊಂದು ವಿದ್ವತ್ತಿಯ ಬಲ-ಅಹಂಕಾರ. ಮಹನ್ನೀಯರಾದ ಶ್ರೀಪಾದರಾಯರ ಯೋಗ್ಯತೆಯು ಅವರ ಮನಸ್ಸಿನಲ್ಲಿ ಬರಲೇ ಇಲ್ಲ. ಅವರನ್ನೂ ಅದೇ ಸಾಲಿನಲ್ಲಿ ಎಳೆದುಬಿಟ್ಟರು. ಎಷ್ಟಾದರೂ ಇವರು—

'ಶಬ್ದಜಾಲಂ ಮಹಾರಣ್ಯಂ ಚಿತ್ತಭ್ರಮಣ ಕಾರಣಂ|'

(ಶಂಕರಾಚಾರ್ಯ)

ಎಂಬಂತೆ, ಚಿತ್ತಭ್ರಮಣವನ್ನುಂಟುಮಾಡುವಂಥ ಶಬ್ದಬ್ರಹ್ಮರಾದ ಪಂಡಿತರೇ ಹೊರತು ದೃಢಚಿತ್ತವನ್ನು ಸಂಪಾದಿಸಿ ಭಕ್ತಿಯೋಗಸಾಮರ್ಥ್ಯದಿಂದ ಪರಮಾತ್ಮನನ್ನು ಪ್ರತ್ಯಕ್ಷೀಕರಿಸಿಕೊಂಡಂಥವರಲ್ಲ. ಅಂದಮೇಲೆ ಇಂಥವರು ಭಗವದ್ಭಕ್ತರಾದ ಶ್ರೀಪಾದರಾಯರ ಪಾಕಂಗಕ್ಕಾದರೂ ಹತ್ತಬಹುದೇ! ಪಂಡಿತರು ಆಳವಾದ ವಿಚಾರವನ್ನು ಮಾಡಲಿಲ್ಲ. ಏಕದಾ ಧುಮುಕಿಬಿಟ್ಟರು. ತತ್ಕ್ಷಣ ಪಂಡಿತರ ತಂಡವೊಂದು ಎದೆಯುಬ್ಬಿಸಿಕೊಂಡು ಶ್ರೀಪಾದರಾಯರೆದುರಿಗೆ ಹೋಗಿ ವೀರಾಸನ ಹಾಕಿಕೊಂಡು ಕುಳಿತಿತು. ತಾಸೆರಡು ತಾಸು ಆ ಮಾತು ಈ ಮಾತು ನಡೆದವು ಅಲ್ಲಿಂದ

'ವಿದ್ಯಾ ವಿವಾದಾಯ ಧನಂ ಮದಾಯ|'

ಎಂಬಂತೆ ವಿವಾದಕ್ಕೋಸ್ಕರವೇ ವಿದ್ಯೆಗಲಿತಂಥ ಪಂಡಿತರು ತಡೆಯಲಿಲ್ಲ. ಶಾಸ್ತ್ರವಾದಕ್ಕೆ ಶ್ರೀಪಾದರಾಯರನ್ನು ಆಹ್ವಾನ ಮಾಡಿಬಿಟ್ಟರು. ಗವಿಯಲ್ಲಿದ್ದ ಸಿಂಹವನ್ನು ನರಿಯು ಎಬ್ಬಿಸಿ ಯುದ್ಧಕ್ಕೆ ಕರೆದಂತಾಯಿತು. ಆದರೇನು? ಪಂಡಿತರ ಅಹಂಭಾವದ ಮಾತನ್ನು ಕೇಳಿ ಶ್ರೀಪಾದರಾಯರಿಗೆ ನಗೆ ಬಂದಿತು. ಆಗ ಅವರು ಇಷ್ಟೇ ಹೇಳಿದರು:— 'ಶಾಸ್ತ್ರವಾದಕ್ಕೇನೋ ನಾವು ಸಿದ್ಧರೇ ಇರುವೆವು; ಆದರೆ ಇದು ಬರೇ ನಮ್ಮ ನಿಮ್ಮಲ್ಲಿ ನಡೆಯಕೂಡದು. ಇಲ್ಲಿಯ ಮಹಾರಾಜನು ಮಧ್ಯಸ್ಥನಾಗಬೇಕು; ಮತ್ತು ನಮ್ಮ ನಿಮ್ಮ ನಡುವೆ ಒಂದು ಪಣ(ಕರಾರು)ವಾಗಬೇಕು. ಅಂದರೆ

ಮಾತ್ರ ನಾವು ಬರುವೆವು.' ವಾದಕ್ಕೆ ಆತುರಪಡುತ್ತಿದ್ದ ಪಂಡಿತರು ಹಿಂದುಮುಂದಿನ ವಿಚಾರವನ್ನು ಮಾಡದೆ ಹಾಗೇ ಆಗಲೆಂದರು. ಕೂಡಲೆ ಮಹಾರಾಜನಿಗೆ ಈ ಸಂಗತಿಯನ್ನೆಲ್ಲ ತಿಳಿಸಿ ಅವನನ್ನು ಮಧ್ಯಸ್ಥನನ್ನಾಗಿ ಟ್ಟುಕೊಂಡು ಪಣವೇನಾಗಬೇಕೆಂದು ಕೇಳಿದರು. ಅದಕ್ಕೆ ಶ್ರೀಪಾದರಾಯರು:—'ಈ ವಾದದಲ್ಲಿ ನಾವು ಸೋತದ್ದೇ ಆದರೆ ಯತ್ಯಾಶ್ರಮವನ್ನು ಬಿಟ್ಟುಬಿಡುವೆವು. ನೀವು ಸೋತ ಪಕ್ಷದಲ್ಲಿ ಎಲ್ಲರೂ ಯತ್ಯಾಶ್ರಮವನ್ನು ಸ್ವೀಕರಿಸಬೇಕು' ಇದೇ ಪಣವೆಂದು ಹೇಳಿದರು ಮಹಾರಾಜನೂ, ಪಂಡಿತರೂ ಇದಕ್ಕೊಪ್ಪಿಕೊಂಡರು. ಶಾಸ್ತ್ರವಾದಕ್ಕಾರಂಭವಾಯಿತು. ಹಿಂದು ದಿನವಾಯಿತು; ಎರಡು ದಿನಗಳಾದವು ವಾದಿ ಜಯದಲ್ಲಿ ಸಿಂಹಸ್ವರೂಪರಾದ ಶ್ರೀಪಾದರಾಯರೆದುರಿಗೆ ಈ ಅಹಂಮನ್ಯ ಪಂಡಿತರು ಎಷ್ಟು ದಿವಸ ತಾನೆ ತಡೆದಾರು? 'ಹಿಟ್ಟು ಇದ್ದಷ್ಟು ರೊಟ್ಟಿ' ಎಂಬ ಗಾದೆಯಂತೆ ಅವರ ಬಂಡವಾಳವೇ ಅಲ್ಲಿಗೆ ಮುಗಿಯಿತು. ಶ್ರೀಪಾದರಾಯರು ಕೋಟಿಯ ಮೇಲೆ ಕೋಟಿಯನ್ನು ಏರಿಸಿಹತ್ತಿದರು. ಪಂಡಿತರಿಗೆ ಮಾತಾಡಲಿಕ್ಕೆ ಬಾಯೇ ಬಾರದು. ಮೋರೆಗಳೆಲ್ಲ ಕಪ್ಪು ಬಡೆದವು. ಮಧ್ಯಸ್ಥನಾದ ಮಹಾರಾಜನು:—ನೀವು ಪಾಂಡಿತ್ಯದ ಅಹಂಕಾರದಲ್ಲಿ ಭಗವದ್ಭಕ್ತರಾದ ಮಹಾ ಯತಿವರರನ್ನು ಕೆಣಕಿದುದಕ್ಕೆ ಇದೇ ನಿಮಗೆ ಶಿಕ್ಷೆ. ಈಗಲೇ ಎಲ್ಲರೂ ನಿಮ್ಮ ಪಣದಂತೆ ಯತ್ಯಾಶ್ರಮವನ್ನು ಸ್ವೀಕರಿಸಿರಿ, ಎಂದು ನಿದಾಕ್ಷಿಣ್ಯವಾಗಿ ಹೇಳಿಬಿಟ್ಟನು. ಗೃಹಸ್ಥಾಶ್ರಮಿಗಳಾದ ಪಂಡಿತರೆಲ್ಲರಿಗೂ ಜೀವದ ಸುತ್ತು ಬಂದಿತು. ಮಾಡಬೇಕೇನು? ಮಹಾರಾಜನ ಸಮಕ್ಷ ಪಣವಾಗಿ ಹೋಗಿದೆ. ಮರುಮಾತಾಡುವಂತಿಲ್ಲ. ನಿರ್ವಾಹವಿಲ್ಲದೆ ಎಲ್ಲರೂ ಯತ್ಯಾಶ್ರಮಿಗಳಾದರು. ಮಾಡಿದವನುಣ್ಣುವನು ಮಣಿಯುಂಥ ಕಡಬು!

ಹೀಗೆ ಯತ್ಯಾಶ್ರಮವನ್ನು ಧರಿಸಿದ ಪಂಡಿತರು ಮುಂದಾದರೂ ಬುದ್ಧಿಗಲಿತರೆಂದು ನೀವು ತಿಳಿದಿರಬಹುದು. ಇಲ್ಲ, ಹಾಗಾಗಲಿಲ್ಲ. ಇವರು ಯತ್ಯಾಶ್ರಮಿಗಳಾದದ್ದೇ ಹುಲಿದೊಗಲು ಹೊದ್ದುಕೊಂಡ ನರಿಯಂತೆ ತೋರಿಕೆಗೆ ಮಾತ್ರ ಆಗಿದ್ದರು; ಅಂದಮೇಲೆ ಇವರಲ್ಲಿ ಯತ್ಯಾಶ್ರಮಕ್ಕೆ ತಕ್ಕ ಗುಣಗಳು ಹೇಗೆ ಬಂದಾವು? ದ್ವೇಷಾಸೂಯೆಗಳು ಹೇಗೆ ನಾಶವಾದಾವು? ಎಲ್ಲರೂ ಕೂಡಿ ಮಾಟಗಾರನಿಂದ ಏನೋ ಮಾಟ ಮಾಡಿಸಿ, ಶ್ರೀಪಾದರಾಯರಿಗೆ ಮಾತಾಡಲಿಕ್ಕೆ ಬಾರದಂತೆ ಮಾಡಿದರು. ಕೈಲಾಗದ್ದು

ಮೈಯೆಲ್ಲ ಹರಕೊಂಡಿತೆಂಬ ಗಾದೆಯ ಸಮಾಚಾರ. ಶ್ರೀಪಾದರಾಯರು ಇದಕ್ಕೆಲ್ಲ ಬೆದರುವರೇ? ಆಗಲೇ ಕೋಟಿ ಕೋಟಿ ಜಪಮಾಡಿ ದೊಡ್ಡ ದೊಂದು ಹಯಗ್ರೀವ ಮೂರ್ತಿಯನ್ನು ಸ್ಥಾಪನೆ ಮಾಡಿದರು.

ಹಯಗ್ರೀವ ಹಯಗ್ರೀವ ಹಯಗ್ರೀವೇತಿ ಯೋ ವದೇತ್ ||
ತಸ್ಯ ನಿಃಸರತೇ ವಾಣೀ ಜಹ್ನು ಕನ್ಯಾ ಪ್ರವಾಹವತ್ ||

ಎಂಬ ರೀತಿಯಾಗಿ ಶ್ರೀ ಹಯಗ್ರೀವದೇವರ ಅನುಗ್ರಹದಿಂದ ಸುರಗುರುವಿನಂತೆ ಮಾತಾಡಲಿಕ್ಕೆ ಬಂದುದಲ್ಲದೆ ಪಂಡಿತರು ಮಾಡಿಸುವ ಮಾಟಗಳು ಒಂದೂ ಇವರ ಮೇಲೆ ನಡೆಯದಂತಾದವು. ಆಗ ಸರ್ವರೂ ಮೋರೆಯನ್ನೂ ತಗಿಸಿಕೊಂಡು ಬಂದು ಶ್ರೀಪಾದರಾಯರಲ್ಲಿ ಕ್ಷಮೆಯನ್ನು ಯಾಚಿಸಿದರು.

ಈ ಹಯಗ್ರೀವ ಮೂರ್ತಿಯನ್ನು ದೊಡ್ಡ ಮಠದಲ್ಲಿ ಅದ್ಯಾಪಿ ನೋಡಬಹುದು.

ಭೋ ವಾಚಕವೃಂದ! ಭಗವದ್ಭಕ್ತರನ್ನು ನಿಷ್ಕಾರಣವಾಗಿ ತಡಪಿದ ಪಂಡಿತರ ಗತಿಯೇನಾಯಿತೆಂಬದನ್ನು ನೋಡಿದಿರೇನು? ಭಕ್ತರೆಂದರೆ ಭಗವಂತನಿಗೆ ಜೀವಪ್ರಾಣ. ಅವರನ್ನು ಒಂದುಕ್ಷಣವಾದರೂ ಬಿಟ್ಟಗಲಲಾರನು.

ಒಡಲನೆಳಲಂದದಲಿ ಹರಿನ | ಮ್ಮೊಡನೆ ತಿರುಗುವ ಒಂದರಕ್ಷಣ |
ಬಿಡದೆ ಬೆಂಬಲವಾಗಿ ಭಕ್ತಾಧೀನನೆಂದೆನಿಸೀ ||

(ಹರಿಕಥಾಮೃತಸಾರ)

ಎಂಬ ದಾಸರಾಯರ ವಾಕ್ಯದಂತೆ ಭಕ್ತಾಧೀನನಾದ ಭಗವಂತನು ಯಾವಾಗಲೂ ಅವರ ಬೆನ್ನ ಹಿಂದೆಯೇ ಇರುವನೆಂದಮೇಲೆ ಅಂಥವರನ್ನು ತಡವುವದು ಮುಂದಿನ ಅನರ್ಥಕ್ಕಾಗಿಯೇ ಸರಿ.

ಒಮ್ಮೆ ಶ್ರೀಪಾದರಾಯರ ಇತರ ಶಿಷ್ಯರೆಲ್ಲರೂ ಸೇರಿ ತಮ್ಮ ಒಡನಾಡಿ ಬಾಲಕರಾದ ವ್ಯಾಸರಾಯರ ಮೇಲೆ ಅಸೂಯೆಪಟ್ಟು ಭೋಜನದಲ್ಲಿ ವಿಷವನ್ನು ಹಾಕಿ ಉಣಿಸಲು, ಅಂದೇ ರಾತ್ರಿ ಸ್ವಾಮಿಯು ಅದಕ್ಕೆ ತಕ್ಕ ಪ್ರತೀಕಾರ ಔಷಧವನ್ನು ಸ್ವಪ್ನದಲ್ಲಿಯೇ ಪ್ರಯೋಗಿಸಿ, ಅವರನ್ನು ಸಲಹಿದನು. ಆಗ ಶಿಷ್ಯರ ಮೋರೆಗಳು ಬತ್ತಿ ಹೋದವು. ಗುರುಗಳ ಎದುರಿಗೆ ನಾಚಿಕೆಗೇಡಾದರು.

ಹಿಂದಕ್ಕೆ ಪಾಂಡವರನ್ನು ಅಪಮಾನಗೊಳಿಸಲಿಕ್ಕೆಂದು ಬಂದ ಕೌರವನನ್ನು ಗಂಧರ್ವರಿಂದ ಹಿಚಾಡೀ ಕಟ್ಟಿಸಿ ಕೂಡಿಸಲಿಲ್ಲವೇ?

ಅಂಬರೀಷ ಮಹಾರಾಜರ ಏಕಾದಶೀವ್ರತವನ್ನು ಹಾನಿಗೆಯ್ಯ ಬೇಕೆಂದು ಬಂದ ದೂರ್ವಾಸಋಷಿಗಳನ್ನು ಚಕ್ರದ ಬಾಧೆಯಿಂದ ತ್ರಾಹಿ ತ್ರಾಹಿ ಎನಿಸಿಬಿಡಲಿಲ್ಲವೇ?

ಅಂತೆಯೇ ಶ್ರೀ ಪುರಂದರದಾಸರು ಇಂಥ ಮಹಾನುಭಾವರ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ನಮಗೆ ಎಚ್ಚರಿಕೆ ಕೊಟ್ಟಿರುತ್ತಾರೆ.

"ಕರವಮುಗಿದು ಸಜ್ಜನರಿಗೆ ಶಿರಬಾಗಿ ಚರಿಸುತಿರೆಚ್ಚರಿಕೆ ||
ಸಿರಿಯೆಂಬ ಸೊಡರಿಗೆ ಮಾನ್ಯರ ಅವಮಾನ ಬಿರುಗಾಳಿ ಎಚ್ಚರಿಕೆ||"

---

## ೮ ಕಂಕಣಾಚಾರ್ಯ.



ಶ್ರೀಪಾದರಾಯರು ಉತ್ತರ ದೇಶದ ಸಂಚಾರವನ್ನು ಮುಗಿಸಿಕೊಂಡು, ದಕ್ಷಿಣದ ಕಡೆಗೆ ವಿಜಯನಗರಕ್ಕೆ ಬಂದರು. ಆಗ್ಗೆ ವಿಜಯನಗರದಲ್ಲಿ ವೀರನರಸಿಂಗ ಅರಸನು ಆಳುತ್ತಿದ್ದನು. ವಿಜಯನಗರದ ದೊರೆಗಳು ಮೊದಲಿನಿಂದಲೂ ಸಾಧು-ಸಂತರಲ್ಲಿ-ಬ್ರಾಹ್ಮಣರಲ್ಲಿ ಅತುಲವಾದ ಭಕ್ತಿ-ವಿಶ್ವಾಸವುಳ್ಳವರು. ಪಂಡಿತರಿಗೂ-ಕವಿಗಳಿಗೂ ಆಶ್ರಯದಾತರು. ಅಂತೆಯೇ ಅವರ ಕಾಲದಲ್ಲಿ ಅನೇಕಾನೇಕ ಸಾಧು-ಸಂತರೂ, ಕರ್ಣಾಟಕಾಂಧ್ರ ಕವಿಗಳೂ-ಪಂಡಿತೋತ್ತಮರುಗಳೂ ಪ್ರಸಿದ್ಧಿಗೆ ಬಂದರು. ಇರಲಿ.

ವೀರನರಸಿಂಹನು ಶ್ರೀಪಾದರಾಯರು ಬಂದ ಸುದ್ದಿಯನ್ನು ಕೇಳಿದ ಕೂಡಲೆ ಹಿರಿ ರಾಜವೈಭವದೊಂದಿಗೆ ಅವರನ್ನು ಮೆರವಣಿಗೆಯಿಂದ ಕರೆದೊಯ್ದನು. ಅಂದು ಅರಮನೆಯಲ್ಲಿ ಅತ್ಯಂತ ಸಂಭ್ರಮದಿಂದ ದೇವರ ಪೂಜೆ ನಡೆಯಿತು. ಪೂಜೆಯ ಕಾಲದಲ್ಲಿ ದೊರೆಯು ದೇವರಿಗೆ ಒಂದು ಅಮೌಲ್ಯವಾದ ರತ್ನಕಂಕಣವನ್ನರ್ಪಿಸಿದನು. ಯಾವ ಗಜಪತಿ ರಾಜನನ್ನು ಗೆದ್ದು ಅವನಲ್ಲಿದ್ದ ಎರಡು ರತ್ನಕಂಕಣಗಳನ್ನು ತಂದಿದ್ದನೋ, ಅದರಲ್ಲಿಯೇ ಇದೊಂದು. ಇನ್ನೊಂದನ್ನು ಭಂಡಾರದಲ್ಲಿಟ್ಟು ಬಲವಾದ ಬೀಗಮುದ್ರೆ ಮಾಡಿಸಿದ್ದನು. ಮುಂದೆ ಕೆಲವು ದಿನಗಳು ಕಳೆದವು. ಶ್ರೀ

ಪಾದರಾಯರು ವಿಜಯನಗರದಲ್ಲೇ ವಾಸಮಾಡಿದ್ದರು. ಹಿಂದಾನೊಂದು ದಿವಸ ಅದೇನು ಕಾರಣದಿಂದಲೋ ಅರಸನು ತನ್ನ ಭಂಡಾರದ ಬಾಗಿಲನ್ನು ತೆಗಿಸಲು ಅದರಲ್ಲಿಟ್ಟಿದ್ದ ರತ್ನಕಂಕಣವೇ ಇರಲಿಲ್ಲ. ಅಹಾ! ಇದೇನು ವಿಚಿತ್ರ! ಅರಸನು ಸ್ವಯಂ ತಾನೇ ಮೊಹರು ಮಾಡಿಟ್ಟಿದ್ದ ಭಂಡಾರ ದೊಳಗಿನ ರತ್ನಕಂಕಣವು ಹೋಯಿತೆಲ್ಲಿ? ಕಂಕಣಚೋರರು ಯಾರಿರ ಬಹುದು? ಅರಸನಿಗೆ ಇದೊಂದು ಸಮಸ್ಯೆಯಾಗಿ ಕುಳಿತಿತು. ಜನರಿಗೂ ಸೋಜಿಗ. ಭಂಡಾರದ ಕಾವಲುಗಾರರಂತೂ ಕೈಕಾಲು ಬಿಡಹತ್ತಿದರು. ಧೊರೆಯು ಆಗಲೇ ಮಂತ್ರಿಯನ್ನು ಕರೆಯಿಸಿ ಏಕಾಂತದಲ್ಲಿ ಯೋಚಿಸಿ ದನು. ಇನ್ನು ಮೂರು ದಿವಸದಲ್ಲಿ ಇದರ ಶೋಧವನ್ನು ಹಚ್ಚಿಯೇ ತೀರ ಬೇಕೆಂದು ಕರ್ಮಚಾರಿಗಳಿಗೆ ಕಟ್ಟಪ್ಪಣೆ ಮಾಡಲ್ಪಟ್ಟಿತು. ಹಿಂದು ದಿನ ವಾಯಿತು, ಎರಡುದಿನಗಳಾದವು, ಮೂರನೆಯ ದಿನವೂ ಅರ್ಧ ಸವೆ ಯಿತು. ಕಂಕಣಚೋರನ ಸುಳಿವೇ ಇಲ್ಲ. ಕರ್ಮಚಾರಿಗಳ ಪ್ರೋರೆ ಕಪ್ಪಿಟ್ಟಿತು. ಅರಸನು ನಮಗೆ ಎಂತಹ ಕ್ರೂರಶಾಸನವನ್ನು ವಿಧಿಸುವ ನೋ, ಎಂದು ಅವರು ಅಂಜಿ ಗಡಗಡ ನಡುಗಹತ್ತಿದರು ಕಂಕಣವು ಸಾಮಾನ್ಯವಾದುದಲ್ಲ ಮೇಲಾಗಿ ಮತ್ತೊಬ್ಬ ಬಲಿಷ್ಠ ದೊರೆಯನ್ನು ಗೆದ್ದು ತಂದದ್ದು.

ಇಂಥಾದ್ದು ಹೋದ ಮೇಲೆ ಮಹಾರಾಜನು ಸುಮ್ಮನೆ ಬಿಟ್ಟಾನೇ? ಕಾವಲುಗಾರರ ಗತಿಯೇನಾಗುವದೋ? ನಮ್ಮ ಅವಸ್ಥೆ ಏನೋ? ಎಂಬ ದಾಗಿ ಕರ್ಮಚಾರಿಗಳೆಲ್ಲರೂ ಚಿಂತಾಕ್ರಾಂತರಾದರು. ಹಿಂದಕ್ಕೆ: — ಸೀತಾಮಾತೆಯನ್ನು ಹುಡುಕಿಕೊಂಡು ಬರಲಿಕ್ಕೆ ಹೋದ ಹನುಮಂತನೇ ಮೊದಲಾದವರು ತಮ್ಮ ಗಡುವು ಮೀರಲಿಕ್ಕೆ ಬಂದುದನ್ನು ನೋಡಿ ಸುಗ್ರೀವನ ಉಗ್ರಶಾಸನಕ್ಕೆ ಹೆದರಿ ಸಮುದ್ರದಲ್ಲಿ ಹಾರಿಕೊಳ್ಳಲಿಕ್ಕೆ ಕುಳಿ ತಂತೆ ಈಗಿನ ಕರ್ಮಚಾರಿಗಳ ಸ್ಥಿತಿಯಾಯಿತು. ಕಂಕಣಚೋರರಾದರೋ ಸಿಕ್ಕುವ ಸಂಭವವೇ ಇಲ್ಲ. ಸಿಕ್ಕದಿದ್ದರೆ ಕರ್ಮಚಾರಿಗಳೂ, ಕಾವಲುಗಾ ರರೂ ಉಳಿಯುವಂತಿಲ್ಲ. ಮಾಡಬೇಕೇನು? ಇದೊಳ್ಳೇ ಬಿಗುವು ಬಂದಿತು. ಸಂಕಟ ಬಂದಾಗ್ಗೆ ವೆಂಕಟರಮಣನೆನ್ನುವಂತೆ ದೇವರನ್ನು ಧ್ಯಾನಿಸುತ್ತ ಕುಳಿತರು. ಅಷ್ಟರಲ್ಲಿ ಅದೇನು ಕರ್ಮಚಾರಿಗಳ ಸುದೈವವೋ, ಕಂಕಣವಿ ರುವ ಸ್ಥಳವು ಗೊತ್ತಾದಂತಾಯಿತು. ಆದರೇನು? ಅದು ಹಳ್ಳೇ ರಹಸ್ಯ

ವಾದ ಸ್ಥಳ. ಕರ್ಮಚಾರಿಗಳು ಕೂಡ ಅದನ್ನು ಪ್ರಸಿದ್ಧಮಾಡುವಂತಿಲ್ಲ. ಬೈಲಿಗೆಳೆಯುವಂತಿಲ್ಲ. ಅಂದಮೇಲೆ ಗೊತ್ತಾಗಿ ಪ್ರಯೋಜನವೇನು? ಅಯ್ಯೋ! ದೇವರು ವರವು ಕೊಟ್ಟರೂ ಪೂಜಾರಿಯು ವರವು ಕೊಡಲಿಲ್ಲೆಂಬ ಗಾದೆಯಂತೆ ಕಳವಿನ ಮಾಲು ಇರುವ ಸ್ಥಳವು ಗೊತ್ತಾದರೂ, ಮಾಲು ಮೋರೆಯು ಎದುರಿಗೇ ಇದ್ದರೂ, ಅದನ್ನು ಉಚ್ಚರಿಸಲಿಕ್ಕೆ ಬಾರದಂಥ ಅದಾವ ಕಾರಣವಿರಬಹುದು? ಅಂಥಾ ರಹಸ್ಯವಾದ ಸ್ಥಳವಾದರೂ ಇನ್ನಾವುದಿದ್ದೀತು? ಭೋ ವಾಚಕ ಮಹಾಶಯ! ಅದು ಮತ್ತಾವುದೂ ಅಲ್ಲ. ರಾಜನ ಪರಮಪ್ರೀತಿಯ ವೇಶ್ಯೆಯ ಕೈಯಲ್ಲಿಯೇ ಕಂಕಣಗಳಿವೆ. ನೋಡಿದಿರಾ! ರಾಜನ ಹೊರತು ಮತ್ತೊಂದು ಗಂಡು ಹುಳವೂ ಅಲ್ಲಿ ಪ್ರವೇಶಿಸುವಂತಿಲ್ಲ. ಹಾಗಾದರೆ ರಾಜನೇ ಒಯ್ದು ಕೊಟ್ಟಿರಬಹುದೇ? ತಾನೇ ತನ್ನ ವೇಶ್ಯೆಗೆ ಕೊಟ್ಟದ್ದರೆ ಇಷ್ಟೆಲ್ಲ ಘಟಾಟೋಪವೇತಕ್ಕೆ? ಇಲ್ಲ-ಇಲ್ಲ. ರಾಜನು ಕೊಟ್ಟೇ ಇಲ್ಲ. ಹಾಗಿದ್ದರೆ ವೇಶ್ಯೆಗೆ ಕಂಕಣಗಳೆಲ್ಲಿಂದ ಬಂದವು? ಕರ್ಮಚಾರಿಗಳಿಗೆ ಒಳ್ಳೇ ಗೊಂದಲಬಿತ್ತು. ಇದನ್ನು ಹೊರಗೆ ಹಾಕುವದೇ ಕಠಿಣ ಬಂತು. ಕಡೆಗೆ ಏನೇನೋ ಮಾಡಿ ಮಂತ್ರಿಯ ಮುಖದಿಂದ ರಾಜನಿಗೆ ಈ ಸಂಗತಿಯನ್ನು ತಿಳಿಸಿದರು. ರಾಜನಿಗೆ ಪರಮಾಶ್ಚರ್ಯವಾಯಿತು. ಎಲಾ, ಇದೇನು? ನಾನು ಭಂಡಾರದಲ್ಲಿ ಬೀಗ-ಮುದ್ರೆ ಮಾಡಿಟ್ಟ ಕಂಕಣವು ವೇಶ್ಯೆಯ ಕೈಯಲ್ಲಿ ಹೇಗೆ ಬಂತು? ಎಂದವನೇ ಆಕೆಯನ್ನು ಕರೆಯಿಸಿದನು. ನೋಡುತ್ತಾನೆ, ಎರಡೂ ಕೈಯಲ್ಲಿ ಎರಡು ರತ್ನಕಂಕಣಗಳು. ಅತೀವ ಸೋಜಿಗವಾಯಿತು ಅಹಹಾ! ನಾನು ಒಂದು ಕಂಕಣವನ್ನು ಹುಡುಕುವದರೊಳಗೆ ಎರಡು ಕಂಕಣಗಳೂ ಈಕೆಯ ಕೈಯಲ್ಲಿ ಸಿಕ್ಕವಲ್ಲಾ! ಇದೇನಾಗಿದ್ದೀತು? ಒಂದನ್ನು ಗುರುಗಳಾದ ಶ್ರೀಪಾದರಾಜರಿಗೆ ಕೊಟ್ಟದ್ದೆನು. ಅದಂತೂ ಇಲ್ಲಿ ಬರಲಿಕ್ಕೆ ಸಂಭವವೇ ಇಲ್ಲ. ಅಂದ ಮೇಲೆ ಈ ಕಂಕಣಗಳೇ ಬೇರೆಯಾಗಿರಬಹುದೇ? ಅಥವಾ ನಾನೇ ಭ್ರಾಂತನಾಗಿರಬಹುದೇ? ಏನಾದರೂ ಆಗಲಿ. ಆಕೆಯನ್ನೇ ಕೇಳೋಣ! ಏನು ಹೇಳುತ್ತಾಳೋ ತಿಳಿದು ಹೋಗುವದು; ಎಂದು ಯೋಚಿಸಿ ವೇಶ್ಯೆಯನ್ನೇ ವಿಚಾರಿಸಿದನು. ಆಕೆಗೇನು ಭಯ? ಹೇಳಿಬಿಟ್ಟಳು:—ತಮ್ಮ ಗುರುಗಳಾದ ಶ್ರೀಪಾದರಾಜರೆಂಬ ಯತಿವರ್ಯರು ಈಗ ಎರಡು ದಿನದ ಹಿಂದೆ ನನ್ನ ಮನೆಗೆ ಬಂದು ಇವೆರಡೂ ಕಂಕಣಗಳನ್ನು ಕೊಟ್ಟು ಹೋದರು. ದೊರೆಯು

ಮುಗ್ಧನಾಗಿ ಹೋದನು. ಅಯ್ಯೋ! ಇದೇನು? ಮಹಾತ್ಮರಾದ ಗುರುಗಳು ವೇಶ್ಯೆಯ ಮನೆಗೆ ಬಂದು, ಕಂಕಣವನ್ನು ಕೊಟ್ಟು ಹೋದರೇ? ಛೀ-ಛೀ! ಇದನ್ನು ನಾನು ಎಷ್ಟು ಮಾತ್ರಕ್ಕೂ ನಂಬಲಾರೆ-ನಂಬಲಾರೆ. ಹಿಂದುವೇಳೆ ಅವರೇ ಕೊಟ್ಟರೆಂದು ಕಲ್ಪಿಸಿದರೂ ಹಿಂದು ಕಂಕಣವನ್ನು ಮಾತ್ರ ಕೊಡಬೇಕಾಗಿತ್ತು. ಇನ್ನೊಂದು ಅವರಿಗೆ ಹೇಗೆ ಬಂತು? ಗುರುಗಳು ಜಾರಕರ್ಮದ ಕೂಡ ಚೋರಕರ್ಮವನ್ನೂ ಮಾಡಿದರೇ! ಇದನ್ನೆಲ್ಲ ನಾನು ಹೇಗೆ ನಂಬಲಿ? ಮತ್ತೊಮ್ಮೆ ವಿಚಾರಿಸಿದನು; ಮತ್ತೂ ಅದೇ ಹೇಳಿಕೆ. ರಾಜನಿಗೆ ಭಯ-ವಿಸ್ಮಯಗಳುಂಟಾದವು. ಶ್ರೀಪಾದರಾಯರ ಯೋಗ್ಯತೆಯು ಆತನಿಗೆ ಪೂರಾ ಗೊತ್ತಿತ್ತು. ಇವಳಾದರೊ ಹೀಗೆ ಹೇಳುತ್ತಿರುವಳು. ಮಾಡಬೇಕೇನು? ವೇಶ್ಯೆಯನ್ನೂ, ಮಂತ್ರಿಯನ್ನೂ ಕರೆದುಕೊಂಡೇ ಗುರುಗಳ ಹತ್ತರ ಹೋದನು. ಗುರುಗಳಿಗೆ ಪಾಪ ಯಾವ ಸುದ್ದಿಯೂ ಗೊತ್ತಿಲ್ಲ ಅವರು ನಿತ್ಯದಂತೆ ಪ್ರಾತರಾಹ್ನಿಕವನ್ನು ತೀರಿಸಿಕೊಂಡು ಪಾಠಪ್ರವಚನದಲ್ಲಿ ಕುಳಿತಿದ್ದರು. ಎಲ್ಲರೂ ಸಾಷ್ಟಾಂಗವಾಗಿ ವಂದಿಸಿದರು. ಗಳಿಗೆಯಾಯಿತು; ಎರಡು ಗಳಿಗೆಯಾಯಿತು ಹಿಬ್ಬರ ಬಾಯಿಂದಲೂ ಮಾತೇ ಇಲ್ಲ. ಮಹಾನುಭಾವರಾದ ಯತಿವರ್ಯರೆದುರಿಗೆ ಈ ಸಂಗತಿಯನ್ನು ತಿಳಿಸಲು ಪ್ರತಿಯೊಬ್ಬರಿಗೂ ಅಂಜಿಕೆ-ಭಯ. ಶ್ರೀಪಾದರಾಯರು ನೋಡಿದರು ಕಡೆಗೆ ತಾವೇ ವಿಚಾರಿಸಿದರು:—"ಎಲೈ ಅರಸೇ, ಇಷ್ಟು ಜನರೂ ಏನೋ ಕಾರಣದಿಂದ ಇಲ್ಲಿಗೆ ಬಂದು ಸುಮ್ಮನೆ ನಿಂತಿರಲ್ಲಾ! ನಿನ್ನ ಕಾರ್ಯವೇನೆಂಬುದನ್ನು ಹೇಳು? ಈ ಮಾತನ್ನು ಕೇಳಿದ ಕೂಡಲೆ ಅರಸನಿಗೆ ಕುತ್ತಿಗೆಯ ಶಿರಗಳು ಬಿಗಿದುಹೋದವು. ಕಣ್ಣುತುಂಬಾ ನೀರು ಬಂದವು. ಅಯ್ಯೋ, ಗುರುಗಳಿಗೆ ಏನೆಂದು ಹೇಳಲಿ? ನಿಜಾಂಶವಾದರೋ ಅವರಿಗೆ ತಿಳಿಸದಿದ್ದರೆ ತಿಳಿಯುವಂತಿಲ್ಲ. ಇನ್ನೇನು ಮಾಡುವದು? ಎಂದು ವೇಚಾಡಹತ್ತಿದನು. ಶ್ರೀಪಾದರಾಯರು ಬಿಡಲಿಲ್ಲ. ಕರ್ಮಚಾರಿಗಳನ್ನು ಕೇಳಿದರು. ಅವರಿಗೂ ಹೆದರಿಕೆ. ಮಹಾರಾಜನೂ, ಮಂತ್ರಿಯೂ ಸುಮ್ಮನಿರುವಾಗ ತಾವೇನೆಂದು ಹೇಳುವರು? ಕಡೆಗೆ ಗುರುಗಳು ಹಿತ್ತಾಯಪಡಿಸಲು, ಕರ್ಮಚಾರಿಗಳು ಎಲ್ಲ ಸಂಗತಿಯನ್ನೂ ನಿವೇದಿಸಿದರು. ವೇಶ್ಯೆಯು ಕೈಯಲ್ಲಿ ಕಂಕಣಗಳಿರುವದನ್ನೂ ತೋರಿಸಿದರು. ಇವರಿಗಾದರೋ ಯಾವ ಗಂಧವೂ ಗೊತ್ತಿಲ್ಲ.

ಕರ್ಮಚಾರಿಗಳಿಗಾಗಲಿ, ರಾಜನಿಗಾಗಲಿ ಏನು ಉತ್ತರ ಹೇಳಬೇಕು? ಅವರಾದರೋ ಸಾಕ್ಷಿಪಟ್ಟಿಯನ್ನು ಸಿದ್ಧಪಡಿಸಿಕೊಂಡು ಮಾಲನ್ನು ಹಿಡಿದು ಕೊಂಡು ಕುಳಿತಿರುವರು ಗೊತ್ತಿಲ್ಲವೆಂದರೆ ಕೇಳುವಂತಿಲ್ಲ. ಶ್ರೀಪಾದ ರಾಯರಿಗೆ ಸಾಕ್ಷಿಯಿಲ್ಲ-ಪಟ್ಟಿಯಿಲ್ಲ ಅವರಿಗೆ ಸಾಕ್ಷಿಯೆಂದರೆ, ಸರ್ವ ಸಾಕ್ಷಿಯಾದ ಪರಮಾತ್ಮನೊಬ್ಬನೇ. ಆತನನ್ನು ಸ್ಮರಿಸಿ ಹೇಳಿದರು. ರಾಜನಿಗೂ ಮಂತ್ರಿಗಳಿಗೂ ಇದರಿಂದ ಸಮಾಧಾನವಾಗಲಿಲ್ಲ.

ಆಗ ಶ್ರೀಗಳವರು ಜ್ಞಾನದೃಷ್ಟಿಯಿಂದ ನೋಡಲು, ಎಲ್ಲವೂ ಸ್ವಾಮಿಯ ಆಟವೆಂದು ತಿಳಿಯಬಂತು. ಕಣ್ಣಲ್ಲಿ ಆನಂದಾಶ್ರುಗಳು ಸುರಿದುಹೋದವು. ಕ್ಷಣ ಹೊತ್ತು ಮನಸ್ಸಿನಲ್ಲಿಯೇ ಸ್ವಾಮಿಯನ್ನು ಕಣ್ತುಂಬಾ ನೋಡಿ—ಅಪ್ಪಾ! ಶ್ರೀಕೃಷ್ಣಮೂರ್ತೀ! ಹಿಂದಕ್ಕೆ ನೀನು ಹದಿನಾರು ಸಾವಿರ ಗೋಪಿಯರ ಮನೆಯಲ್ಲಿ ಸುಳಿದಾಡಿದಂತೆ ನಿನ್ನ ಭಕ್ತ ನಾದ ನನ್ನನ್ನು ಈ ವೇಶ್ಯೆಯ ಮನೆಯಲ್ಲಿ ಸುಳಿದಾಡಿಸಿದೆಯಾ? ಆಗಲಿ, ನಿನ್ನ ಮನಸ್ಸಿಗೆ ಬಂದದ್ದು ನಡೆಯಲೇಬೇಕು ಅದನ್ನು ಮೀರುವದಕ್ಕೆ ನಾನೆಷ್ಟರವನು? ಆದರೆ ಸರ್ವವೂ ನೀನೇ, ಎಂದು ನಂಬಿದ ಭಕ್ತರನ್ನು ಕಾಪಾಡುವ ಭಾರವು ಮಾತ್ರ ನಿನ್ನದು. ಅದನ್ನು ನೋಡಿಕೋ. ಇಲ್ಲ ದಿದ್ದರೆ ಶರಣಾಗತ ರಕ್ಷಕ, ಭಕ್ತರ ಕಾಮಧೇನು, ಭಕ್ತಾಭಿಮಾನಿ ಎಂಬ ಬಿರುದುಗಳೆಲ್ಲ ಅಳಿಸಿ ಹೋಗುವವು. ಹೀಗೆಂದು ಸ್ವಾಮಿಗೆ ಮೊರೆ ಯಿಟ್ಟರು. ಶ್ರೀಪಾದರಾಯರ ಭಕ್ತಿಭಾವವು ಇನ್ನೆಂಥಾದ್ದೋ? ಅವರ ಮನಸ್ಸು ಇನ್ನೆಷ್ಟು ನಿರ್ಮಲವಾದದ್ದೋ? ಸ್ವಾಮಿಯು ಅವರಲ್ಲಿ ಇನ್ನೆಷ್ಟು ಕರುಣವನ್ನಿಟ್ಟದ್ದನೋ? ಪಾಮರರಾದ ನಮ್ಮಿಂದ ಅದನ್ನು ಊಹಿಸಲೂ ಅಸಾಧ್ಯ. ಹಿಂದಕ್ಕೆ ಭಕ್ತನಾದ ಪ್ರಲ್ಹಾದನ ನುಡಿಗೆ ಕಂಬವನ್ನೊಡೆದು ಬಂದಂತೆ, ಗಜರಾಜನ ಸ್ತೋತ್ರಕ್ಕೆ ಗರುಡಗಮನನಾಗಿ ಓಡಿ ಬಂದಂತೆ ತಕ್ಷಣ ಸ್ವಾಮಿಯು ಶ್ರೀಪಾದರಾಯರ ವೇಷದಿಂದಲೇ ಬಂದುಬಿಟ್ಟು, ಈ ಕಂಕಣಗಳನ್ನು ನಾನೇ ಒಯ್ದು ವೇಶ್ಯೆಗೆ ಕೊಟ್ಟಿರುವೆನೆಂದು ಹೇಳಿ ಅದೃಶ್ಯನಾದನು. ಸುಳ್ಳಲ್ಲ.

“ಕರೆಕರೆದಲ್ಲಿಗೆ ಬರುವನು | ತನ್ನ | ಶರಣರ ಕಾದುಕೊಂಡಿರುವನು ||
ಮರೆದು ಬಿಟ್ಟವರನ್ನು ಮರೆವನು | ತನ್ನ | ಸರಿಯೆಂದರ್ಹಲ್ಲು ಮುರಿವನು ||”

ಎಂದು ಹೇಳಿದ ಶ್ರೀದವಿಠ್ಠಲರ ಮಾತು ಸುಳ್ಳಲ್ಲ.

ರಾಜನೂ, ಮಂತ್ರಿಯೂ, ಕರ್ಮಚಾರಿಗಳೂ ಈ ಅದ್ಭುತದೃಶ್ಯ ವನ್ನು ಕಂಡು ಭಯಚಕಿತರಾದರು. ಯಾವ ಸ್ವಾಮಿಯು ಕೌರವನ ಸಭೆಯಲ್ಲಿ ವಿಶ್ವರೂಪವನ್ನು ಪ್ರಕಟಮಾಡಿ ತನ್ನನ್ನು ಕಟ್ಟಲಿಕ್ಕೆ ಬಂದವ ರನ್ನು ಮೋಹಗೊಳಿಸಿದ್ದನೋ, ಅದೇ ಸ್ವಾಮಿಯು ಈಗ ಶ್ರೀಪಾದರಾಯರ ರೂಪದಿಂದ ಬಂದು ಅರಸನೇ ಮೊದಲಾದವರನ್ನು ಭ್ರಾಂತಿಗೊಳಿಸಿದನು. ಈ ಮಾತನ್ನು ಶ್ರೀನಿಧಿತೀರ್ಥರು—

"ಜಿತ್ವಾನೀತಂ ನೃಪೇಣಪ್ರಬಲ ಗಜಪತಿಂ ಕಂಕಣದ್ವಂದ್ವಮೇಕಂ |
ಯಸ್ಮೈದತ್ತಂ ಮನೋಜ್ಞಂ ತದನುನರಪತೇರ್ಭೋಗೇ ನಾಯಯಾ
ನಿಶಾಯಾಂ ||
ಯದ್ರೂಪಃ ಶ್ರೀರಮೇಶಃ ಪರಿಜನಸಹಿತೇ ಜಾಗರೂಕೇದ್ವಿತೀಯಂ |
ದತ್ತಂ ಭೂಪಾಲಮೌಲೌ ಪುನರಪಿತದದಾತ್ಸೋವದಾನ್ಯಾಂ
ಯತೀಂದ್ರಃ ||"

(ಶ್ರೀಪಾದರಾಜಾಷ್ಟಕ)

ಹೀಗೆ ಹೇಳಿಕೊಂಡಿರುವರು.

ಆಯಿತು. ರಾಜನ ಸಂದೇಹವು ದೂರಾಯಿತು. ಶ್ರೀಪಾದರಾಯರ ಮೇಲೆ ಬಂದ ಅಪವಾದವು ಬಯಲಾಯಿತು. ಎಲ್ಲರೂ ಗುರುಗಳಿಗೆ ಸಾಷ್ಟಾಂಗವಾಗಿ ಎರಗಿ ಕ್ಷಮಾಪಣೆಯನ್ನು ಕೇಳಿಕೊಂಡರು. ರಾಜ ನಂತೂ ಅತ್ಯಂತ ಲೀನನಾಗಿ ಹೋದನು. ಭೋ ಸ್ವಾಮೀ! ಗುರು ವರ್ಯ! ನಿನ್ನ ದಯದಿಂದ ಕ್ಷುದ್ರಾದಪಿ ಕ್ಷುದ್ರರಾದ ನಮ್ಮೆಲ್ಲರಿಗೂ ಇಂದು ಸ್ವಾಮಿಯ ದರ್ಶನವಾಯಿತಲ್ಲಾ! ಧನ್ಯರಾದೆವು. ಪುನೀತ ರಾದೆವು; ನಮ್ಮ ಸರ್ವಾಪರಾಧವನ್ನು ಕ್ಷಮಿಸಿ ಮಕ್ಕಳಂತೆ ಕಾಪಾಡ ಬೇಕು. ಎಂಬದಾಗಿ ಅನೇಕ ರೀತಿಯಿಂದ ಸ್ತೋತ್ರಮಾಡಿ ಅವರಿಗೆ ಬಹು ಮಾನ-ಮರ್ಯಾದೆಗಳನ್ನು ಮಾಡಿದನು. ಶ್ರೀಪಾದರಾಯರು ರಾಜ ನನ್ನು ಸಾಂತ್ವವಚನಗಳಿಂದ ಸಂತೈಸಿ, ತಮ್ಮ ಮೇಲೆ ತೋರಿದ ಸ್ವಾಮಿಯ ಕಾರುಣ್ಯಕ್ಕೆ ಮೆಚ್ಚಿ ಆತನನ್ನು ಈ ರೀತಿಯಾಗಿ ಸ್ತುತಿಸಿದರು:—

ರಾಗ—ಆನಂದಭೈರವಿ ಆಟತಾಳ.

ಇಟ್ಟಾಂಗ ಇರುವೆನು ಹರಿಯೇ ಎನ್ನ ಧೊರೆಯೇ || ಪಲ್ಲ ||
ಸೃಷ್ಟಿಗೊಂದಿತ ಪಾದ ಪದುಮ ಶ್ರೀ ಹರಿಯೇ || ಅ. ಪ. ||

ಸಣ್ಣಶಾಲಿಧ್ಯಾನ್ಯದನ್ನ ಬೆಣ್ಣ ಕಾಸಿದ ತುಪ್ಪ| ಚಿನ್ನದ ಹರಿವಾಣದಲಿ ಭೋಜನ || ಘನ್ನಮಹಿಮ ನಿನ್ನ ಕರುಣ ತಪ್ಪಲು ಕಾ | ದನ್ನಕ್ಕೆ ಬಾಯ ಬಿಡಿಸುವಿ ಯಲ್ಲೋ ಸ್ವಾಮಿ || ೧ ||

ಕೆಂಪಿಲಿ ಪೊಳೆವ ಪೀತಾಂಬರ ನುಡಿಸುವಿ | ಸೊಂಪಿನಸಂಚಿನ ಶಾಲು ಹೊದಿಸುವಿಯೋ || ಕಪಿಲ ಹರೇ ನಿನ್ನ ಕೃಪೆಯು ತಪ್ಪಿದ ಮೇಲೆ | ಹೇ ಪಿನಾಕಿ ವಂದ್ಯ ಕೌಪೀನ ದೊರೆಯುದೋ || ೨ ||

ಚಂದ್ರಶಾಲೆ ಚಂದ್ರಕಿರಣದಂತೊಪ್ಪುವ | ಚಂದದ ಮಂಚದೋಳ್ ಮಲಗಿಸುವಿ || ಮಂದರೋದ್ಧರ ನಿನ್ನ ಮಮತೆ ತಪ್ಪಿದ ಮೇಲೆ| ಮಂದಿರ ಡೊಳ್ಳಲೆದಿಂಬು ಮಾಡಿಸುವಿ || ೩ ||

ನರಯಾನದೊಳು ಕ್ಷಣ ನರವರ ನೆನಿಸುವಿ| ವರಛತ್ರಚಾಮರ ಹಾಕಿಸುವಿ || ಕರುಣಸಿಧೇ ನಿನ್ನ ಕರುಣ ತಪ್ಪಿದ ಮೇಲೆ | ಚರಣ ಭರಣ ಪಾದ ರಕ್ಷೆಯು ದೊರೆಯುದೊ || ೪ ||

ಗಂಗಾಜನಕ ಪಾಂಡುರಂಗ ನಿನ ಭಕುತರ | ಸಂಗವಿರಲಿ ದುಷ್ಟ ಸಂಗ ಬೇಡಾ || ಅಂಗನೆಯರ ಕೂಡಾನಂಗಬಾಣಕೆ ಶಿಲ್ಕಿ | ಭಂಗವ ಪಡ ಲಾರೆ ರಂಗವಿಠ್ಠಲ ಕಾಯೊ || ೫ ||

ಸುಳ್ಳಲ್ಲ.

ದಯಾಳು ದೇವರನ ಭಕ್ತಿಯಿಂ ನೆನೆದರೆ| ಆಳಿನಾಳಿಯ್ಯ ||

ಎಂಬ ಸರ್ವಜ್ಞಕವಿಯ ವಚನವೂ,

'ಹೂವು ತರುವರ ಮನೆಗೆ ಹುಲ್ಲು ತರುವಾ||'

ಎಂಬ ದಾಸೋಕ್ತಿಯೂ ಸುಳ್ಳಲ್ಲ. ಯಾವಾಗಲೂ ಭಗವಂತನು ಭಕ್ತರ ಆಧೀನನಾಗಿರುವನು ಅಂತೆಯೇ ಆತನು ಶ್ರೀ ಪುರಂದರದಾಸರಿಗೆ ಮಗನ ರೂಪದಿಂದ(ಅಪ್ಪಣ್ಣ ಭಾಗವತ)ತುಪ್ಪದ ಬಿಂದಿಗೆಯನ್ನು ಹೊತ್ತು ತಂದು ಕೊಟ್ಟನು. ಮತ್ತೊಮ್ಮೆ ಅದೇ ಪುರಂದರದಾಸರಿಂದ ಕೆನ್ನೆಯ ಮೇಲೆ ಹೊಡಿಸಿಕೊಂಡನು. ಚಂಡಾಲನ ರೂಪದಿಂದ ಹಣ ತಂದು ಒಪ್ಪಿಸಿ, ದಾಮಾಜಿಯ ಬಿಡುಗಡೆ ಮಾಡಿದನು

ಕೊಲ್ಹಾಪುರದಲ್ಲಿ ವಾಸಮಾಡುತ್ತಿದ್ದ ಸಖೂಬಾಯಿ ಎಂಬ ಭಕ್ತಳೊಬ್ಬಳು ವಿಠ್ಠಲನಲ್ಲಿ ಕೇವಲ ಭಕ್ತಿಯನ್ನಿಟ್ಟು ಆಷಾಢ ಶುದ್ಧ ಏಕಾದಶಿಯ ದಿವಸಕ್ಕೆ ಸರಿಯಾಗಿ ಭಗವದ್ಭಕ್ತರೊಂದಿಗೆ ಪಂಢರಪುರಕ್ಕೆ ಹೋಗ

ಬೇಕೆಂದು ಹವಣಿಸಿದ್ದಳು. ಈ ಸುದ್ದಿಯು ಅವಳ ಅತ್ತೆಗೆ ತಿಳಿದ ಕೂಡಲೆ ಆಕೆಯು ಸಖೂಬಾಯಿಯನ್ನು ಬಾಯಿಗೆ ಬಂದಂತೆ ಬೈದು, ಒಂದು ಕೋಣೆಯೊಳಗೆ ಕಂಬಕ್ಕೆ ಕಟ್ಟಿ ಹಾಕಿ ಬಾಗಿಲಕ್ಕೆ ಬೀಗವನ್ನು ಜಡಿದಳು. ಪಾಪ! ಸಖೂಬಾಯಿಯು ಏನು ಮಾಡ್ಯಾಳು? ಕೂತಲ್ಲಿಯೇ ಪರಮಾತ್ಮನಿಗೆ ಮೊರೆಯಿಟ್ಟಳು. ಆಗ ಸ್ವಾಮಿಯು ಅವಳ ಭಕ್ತಿಗೆ ಮೆಚ್ಚಿ ತಾನೇ ಸಖೂಬಾಯಿಯ ರೂಪದಿಂದ ಬಂಧನದಲ್ಲಿದ್ದು ಆಕೆಯನ್ನು ಪಂಢರಪುರಕ್ಕೆ ಕಳಿಸಿಬಿಟ್ಟನು. ತಿರುಗಿ ಹದಿನೈದು ದಿವಸದ ಮೇಲೆ ಸಖೂಬಾಯಿಯು ಸಂತೋಷದಿಂದ ತಿರುಗಿ ಬರಲು, ಸ್ವಾಮಿಯು ಅದೃಶ್ಯನಾದನು. ಈ ಅದ್ಭುತದೃಶ್ಯವನ್ನು ಕಂಡು ಅವಳ ಅತ್ತೆಗೂ, ಉಳಿದ ಮನೆಯವರಿಗೂ ಮೈಮೇಲೆ ಮುಳ್ಳುಗಳೆದ್ದವು. ಕೂಡಲೆ ಅವರು ಸಖೂಬಾಯಿಯ ಕಾಲು ಹಿಡಿದುಕೊಂಡು ತಮ್ಮ ತಪ್ಪನ್ನು ಕ್ಷಮಿಸಬೇಕೆಂದು ಕೇಳಿಕೊಂಡರಂತೆ.

ಹೀಗೆ ಪರಮಾತ್ಮನು ತನ್ನ ಭಕ್ತರ ದೆಸೆಯಿಂದ ಬೇಕಾದ ಸಂಕಟವನ್ನು ಸಹಿಸಲಿಕ್ಕೂ ಹಿಂದೆಮುಂದೆ ನೋಡುವದಿಲ್ಲ ಅವರಲ್ಲಿ ಆತನಿಗೆ ಅಷ್ಟೊಂದು ಪ್ರೀತಿ. ಅಂತೆಯೇ ಜಗನ್ನಾಥದಾಸರಾಯರು—

ಜನಪ ಮೆಚ್ಚಿದರೀವ ಧನವಾ| ಹನವಿಭೂಷಣ ವಸನ ಭೂಮಿಯ|
ತನುಮನಗಳಿತ್ತಾದರಿಪರುಂಟೇನೊ ಲೋಕದಲಿ ||
ಅನವರತ ನೆನೆವವರನಂತಾ| ಸನವೆ ಮೊದಲಾದಾಲಯದೊಳ |
ಟ್ಟಣುಗ ನಂದದಲವರ ವಶನಾಗುವ ಮಹಾಮಹಿಮ ||

ಹರಿಕಥಾಮೃತಸಾರ

ಹೀಗೆ ಹೇಳಿಕೊಂಡಿರುವರು.

---

## ೯ ದೇವದರ್ಶನ.

ಒಂದಾನೊಂದು ದಿವಸ ಮುಳಬಾಗಿಲ ಮಠದೊಳಗೆ ಶ್ರೀಪಾದರಾಯರು ಶಿಷ್ಯರಿಗೆ ಪಾಠಪ್ರವಚನ ಹೇಳುತ್ತ ಕುಳಿತಿದ್ದರು. ಪಾಠವು ಬಳ್ಳೇ ಭರದಿಂದ ಸಾಗಿತ್ತು. ಅಷ್ಟರಲ್ಲಿ ಅಂತರಿಕ್ಷದಿಂದ ಒಂದು ಕುಸುಮವು ಬಂದು ಅವರೆದುರಿಗೆ ಬಿತ್ತು. (ಕುಸುಮವು ಶ್ರೀಪಾದರಾಜರ

ತಲೆಯ ಮೇಲೆ ಬಿತ್ತೆಂದು ಕೆಲವರು ಹೇಳುವರು.) ಕುಸುಮವೆಂದರೆ ಏನೋ ಸರ್ವಸಾಮಾನ್ಯವಾದುದಲ್ಲ. ಅತ್ಯಂತ ಸುವಾಸನೆಯುಳ್ಳದ್ದು; ಮನೋಹರವಾದದ್ದು. ಗುರುಗಳೂ ಶಿಷ್ಯರೂ ಆ ಕುಸುಮವನ್ನು ನೋಡಿ ಮುಗ್ಧರಾಗಿ ಹೋದರು. ಇಂತಹ ಕೋಮಲವಾದ ಘಮಘಮಿಸುವ ಕುಸುಮವನ್ನು ಅವರು ಎಂದೂ ನೋಡಿರಲೇ ಇಲ್ಲ. ಹೆಚ್ಚೇನು? ಅದು ಈ ಭೂಲೋಕದ ಕುಸುಮವೇ ಅಲ್ಲ. ಹಾಗಾದರೆ ಅದೆಲ್ಲಿಂದ ಬಂತು? ಒಗೆದವರಾದರೂ ಯಾರು? ಶ್ರೀಪಾದರಾಯರು ಮೇಲಕ್ಕೆ ನೋಡಿಯೆತ್ತಿ ನೋಡಿದರು. ಅವರಿಗೆ ಏನು ತಿಳಿಯಿತೋ ಏನೋ ದೇವರೇ ಬಲ್ಲ. ಒಮ್ಮಿಂದೊಮ್ಮೆ ಪಾಠವನ್ನು ಬಿಟ್ಟೆದ್ದು ಸಾಷ್ಟಾಂಗ ನಮಸ್ಕಾರ ಹಾಕಿದರು; ಮತ್ತು ಆ ಕುಸುಮವನ್ನು ತಕ್ಕೊಂಡು ಕಣ್ಣು-ಮೂಗಿಗೆ ಹಚ್ಚಿಕೊಂಡು ತಲೆಯ ಮೇಲೆ ಇಟ್ಟುಕೊಂಡರು. ಗುರುಗಳ ಈ ಕೃತಿಯನ್ನು ಕಂಡು ಶಿಷ್ಯರು ಬೆಪ್ಪಾಗಿ ಹೋದರು. ಎಲಾ! ಇದೇನಾಗಿರಬಹುದು? ನಮಗೆ ಪಾಠ ಹೇಳುತ್ತ ಕುಳಿತ ಗುರುಗಳೆದುರಿಗೆ ಈ ಅಮೋಘವಾದ ಕುಸುಮವೆಲ್ಲಿಂದ ಬಂತು? ಇದನ್ನು ನೋಡಿ ಗುರುಗಳು ಸಾಷ್ಟಾಂಗವಾಗಿ ವಂದಿಸದರೇಕೆ? ಸಾಕ್ಷಾತ್ ಸ್ವರ್ಗಾಧಿಪತಿಯಾದ ಇಂದ್ರನಾಗಲಿ, ದೇವತೆಗಳಾಗಲಿ ನಮ್ಮ ಗುರುಗಳ ಮೇಲೆ ಪುಷ್ಪವೃಷ್ಟಿಯನ್ನು ಮಾಡಿರಬಹುದೇ? ಛೀ-ಛೀ! ಹಾಗಿರಕೂಡದು. ಪುಷ್ಪವೃಷ್ಟಿಯೇ ಆಗಿದ್ದರೆ ಪುಷ್ಪಗಳ ಸುರಿಮಳೆಯಾಗಬೇಕಾಗಿತ್ತು; ಹಾಗು ಗುರುಗಳ ತಲೆಯ ಮೇಲೆ ಎರೆದಂತೆ ಬೀಳಬೇಕಾಗಿತ್ತು. ಇದಾದರೊ ಒಂದೇ ಪುಷ್ಪ! ಗಾಳಿಗೆ ಹಾರಿ ಬಂದಂತೆ ಬಂದು ಅದೂ ಗುರುಗಳ ಎದುರಿಗೆ ಬಿದ್ದಿರುವದು. ಅಂದಮೇಲೆ ಇದರಲ್ಲೇನೋ ಕೌತುಕವಿರುವದು. ಹೀಗೆಂದು ತಮ್ಮ ತಮ್ಮೊಳಗೆ ತರ್ಕತಾಂಡವವನ್ನು ಹೂಡಿದರು. ಏನಾದರೂ ಅವರಿಗೆ ಈ ಸಮಸ್ಯೆಯು ಬಗೆಹರಿಯಲೊಲ್ಲದು. ಗುರುಗಳನ್ನೇ ಕೇಳಿ ಬಿಡೋಣವೆಂದರೆ ಯಾರೂ ಅವರೆದುರಿಗೆ ಬಾಯಿಬಿಚ್ಚಿ ಮಾತನ್ನೇ ಆಡಲಾರರು. ಪ್ರಾಚೀನಕಾಲದಲ್ಲಿ ಗುರುಗಳ ಯೋಗ್ಯತೆಯು ದೇವರಿಗೆ ಸಮಾನವಾಗಿತ್ತು. ಗುರುಗಳಾದರೂ ಅಂತಹ ಶಾಪಾದಪಿ ಶರಾದಪಿಗಳೇ ಆಗಿದ್ದರು. ಅಂತೆಯೇ ಶಿಷ್ಯರೂ ಅವರಲ್ಲಿ ಪರಮಪೂಜ್ಯಭಾವವನ್ನಿಟ್ಟು ನಡೆದುಕೊಳ್ಳುತ್ತಿದ್ದರು. ಗುರುಗಳ ಎದುರಿಗೆ ಆಸನವನ್ನು ಹಾಕಿಕೊಂಡು ಕೂಡ್ರುತ್ತಿ

ರಲಿಲ್ಲ. ಗದ್ದರಿಸಿ ಮಾತಾಡುತ್ತಿರಲಿಲ್ಲ. ನಗುವು, ಚೇಷ್ಟೆ ಮೊದಲಾದವು ಗಳ ಸುದ್ದಿಯೇ ಇಲ್ಲ. ಇದೆಲ್ಲ ಅವುದೋ ಹಿಂದು ಕಾಲದ ಮಾತಾಗಿ ಹೋಯಿತು. ಈಗಲಾದರೋ ಗುರುಗಳೆದುರಿಗೆ ಕಾಷ್ಠಾಸನದ ಮೇಲೆ ಕಾಲು ಚಾಚಿಕೊಂಡು ಕೂಡ್ರುವ ಹಾಗು ಗುರುಗಳಿಗೇ ತಿರುಮಂತ್ರ ಹೇಳುವ ಶಿಷ್ಯರನೇಕರನ್ನು ಬೇಕಾದಲ್ಲಿ ಕಾಣಬಹುದಾಗಿದೆ. ಇತ್ತೀಚೆ ಗಂತೂ, ಅಂದರೆ ಶಿಕ್ಷಣವು ನಮ್ಮ ಜನರ ಕೈಯಲ್ಲಿ ಬಂದಂದಿನಿಂದಂತೂ ಗುರುಗಳೇ ಶಿಷ್ಯರಾಗಿಯೂ, ಶಿಷ್ಯರೇ ಗುರುಗಳಾಗಿಯೂ ಮಾರ್ಪಡಿಸಲ್ಪ ಟ್ಟಿರುವರು. ಕಲಿಕಾಲವು ಇನ್ನೂ ಏನೇನನ್ನು ತಂದೊಡ್ಡುವದೋ ಅದ ನ್ನಾರು ಬಲ್ಲರು? ಅಗಲಿ, ಇದೂ ಹಿಂದುಕಾಲದ ಮಾತೆಂದು ಹೇಳೋಣ.

ಈಗ ನಾಲ್ಕುನೂರು ವರ್ಷದ ಹಿಂದಿನ ಗುರುಶಿಷ್ಯರ ನಡತೆಯನ್ನು ನೋಡಿದಿರಾ! ಶಿಷ್ಯರೇನು ಚಿಕ್ಕ ಚಿಕ್ಕ ಮಕ್ಕಳಲ್ಲ. ಬೇಕಾದಷ್ಟು ದೊಡ್ಡ ವರೇ ಇದ್ದರು. ಆದರೂ ಗುರುಗಳನ್ನು ಕೇಳುವಷ್ಟು ಧಾರ್ಷ್ಟ್ಯವನ್ನು ಅವರು ಮಾಡಲಿಲ್ಲ. ಕಡೆಗೆ ಶ್ರೀಪಾದರಾಯರೇ ಶಿಷ್ಯರನ್ನು ಕುರಿತು ಹೇಳತೊಡಗಿದರು:—

ಅಪ್ಪಾ, ಶಿಷ್ಯರಾದ ಬಾಲಕರುಗಳಿರಾ! ಇಷ್ಟೊತ್ತಿನ ವರೆಗೆ ಪಾಠ ವನ್ನು ನಿಲ್ಲಿಸಿದ್ದೇಕೆಂಬುದನ್ನೂ, ಈ ಕುಸುಮದ ವೃತ್ತಾಂತವೇನೆಂಬದನ್ನೂ ಕೇಳಲಿಕ್ಕೆ ನೀವೀಗ ಹಳ್ಳೇ ಕುತೂಹಲವುಳ್ಳವರಾಗಿರಬಹುದಲ್ಲವೆ? ಹಾಗಾ ದರೆ ಹೇಳುತ್ತೇನೆ, ಕೇಳಿರಿ.

ನಮಗೆ ಗುರುಸ್ವರೂಪರಾದ ಉತ್ತರಾದಿಮಠದ ಶ್ರೀ ರಘುನಾಥ ತೀರ್ಥರೆಂಬ ಮಹಾತ್ಮರನ್ನು ನೀವೆಲ್ಲರೂ ಬಲ್ಲಿರಷ್ಟೇ? ಅವರು ಈ ಹೊತ್ತು ವೃಂದಾವನಸ್ಥರಾಗಿ ದೇವತಾ ವಿಮಾನದೊಂದಿಗೆ ಸ್ವರ್ಗಕ್ಕೆ ಹೊರಟು ಹೋದರು. ಹೋಗುವಾಗ್ಗೆ ಅವರು ನಮ್ಮ ಮೇಲಿನ ಅವ್ಯಾಜ ಪ್ರೇಮದಿಂದ ಅಂತರೀಕ್ಷದಲ್ಲಿಯೇ ಇಲ್ಲಿಯ ವರೆಗೆ ಬಂದು ಹಿಂದು ಕುಸು ಮವನ್ನೊಗೆದು ತಮ್ಮ ಸ್ವರ್ಗಯಾನವನ್ನು ನಮಗೆ ಸೂಚಿಸಿದರು. ಇದೇ ಅವರು ಒಗೆದ ಕುಸುಮವು. ದೇವದೂತರಿಂದ ಮನ್ನಣೆ ಹೊಂದಿ ಸ್ವರ್ಗೀಯ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಗಮನ ಮಾಡಿದ ನಮ್ಮ ಗುರು ವರ್ಯರು ಇನ್ನೆಷ್ಟು ಪುಣ್ಯವಂತರೋ! ಇದಕ್ಕೋಸ್ಕರವೇ ನಾವು ಅವ ರಿಗೆ ಸಾಷ್ಟಾಂಗವಾಗಿ ವಂದಿಸಿದುದು.

ಶ್ರೀಪಾದರಾಯರ ಈ ನುಡಿಯನ್ನು ಕೇಳಿ ಶಿಷ್ಯರು ಹೌಹಾರಿ ಹೋದರು. ದೇವತೆಗಳನ್ನು ಕಣ್ಣಾರೆ ಕಂಡ ನಮ್ಮ ಗುರುಗಳು ಸಾಮಾನ್ಯರಲ್ಲವೆಂದು ಅವರನ್ನು ಮನದಣಿ ಕೊಂಡಾಡಿದರು.

ಮುಂದೆ ನಾಲ್ಕಾರು ದಿನಗಳಲ್ಲಿಯೇ ಇಂಥ ದಿವಸ ಇಷ್ಟು ಹೊತ್ತಿಗೆ ಶ್ರೀ ರಘುನಾಥತೀರ್ಥರು ವೃಂದಾವನಸ್ಥರಾದರೆಂಬ ವರ್ತಮಾನವು ಮಳಖೇಡಾದಿಂದ ಮುಳಬಾಗಿಲಕ್ಕೆ ಬಂತು. ಈ ವರ್ತಮಾನಕ್ಕೂ ಶ್ರೀಪಾದರಾಯರು ಮೊದಲೇ ತಿಳಿಸಿದುದಕ್ಕೂ ಚಾ-ಚೂ ತಪ್ಪು ಬೀಳದ್ದನ್ನು ನೋಡಿ ಜನರೆಲ್ಲರೂ ಶ್ರೀಪಾದರಾಯರನ್ನು ಇನ್ನೆಷ್ಟು ಕೊಂಡಾಡಿದರೋ ಅದನ್ನು ಹೇಳತೀರದು.

ಹೀಗೆ ಗುರುಗಳಿಗೆ ದೇವದರ್ಶನವಾದುದನ್ನು ಶ್ರೀ ನಿಧಿತೀರ್ಥರು ತಮ್ಮ ಶ್ರೀಪಾದರಾಜಾಷ್ಟಕದಲ್ಲಿ ಬಹು ಮನೋಹರವಾಗಿ ಬಣ್ಣಿಸಿರುತ್ತಾರೆ.

"ಶ್ರೀಮದ್ಯತೀಶ ರಘುನಾಥ ಮುನೇಶ್ಚಮಾಯಾ
ಪುಷ್ಪೈಸ್ಸ್ವಮೂರ್ಧ್ನಿ ಪತತಿಪ್ರಸಮೀಕ್ಷ್ಯ ಚೋಕ್ತ್ಯಾ ||
ಸಂಪ್ರೇರಿತೋರು ರಘುನಾಥ ಮುನೀಶ್ವರಾಯ
ಶ್ರೀಪಾದರಾಜ ಗುರವೇಸ್ತು ನಮಃಶುಭಾಯ ||"

ಶ್ರೀ ರಘುನಾಥತೀರ್ಥರು ಹೂವನ್ನು ಎಲ್ಲಿ ಒಗೆದರೋ, ಆ ಸ್ಥಳದಲ್ಲಿ ದೇವರ ನಿರ್ಮಾಲ್ಯವನ್ನು ಹಾಕುವದೊಂದು ಪದ್ಧತಿಯು ಮುಳಬಾಗಿಲಮಠದಲ್ಲಿ ಇವೊತ್ತಿಗೂ ಬಿದ್ದುಹೋಗಿರುವದು.

ರಘುನಾಥತೀರ್ಥರು ಶಾ. ಶಕೆ ೧೪೨೪ (ಕ್ರಿ. ಶ. ೧೫೦೨) ನೇ ದುಂದುಭಿ ಸಂ|| ದ ಮಾರ್ಗಶಿರ ವದ್ಯ ಪ್ರತಿಪದೆಯ ದಿವಸ ಮಾನ್ಯಖೇಟಪುರದಲ್ಲಿ (ಮಳಖೇಡೆ) ವೃಂದಾವನಸ್ಥರಾದರು. ಇವರ ವೃಂದಾವನವು ಶ್ರೀ ಜಯತೀರ್ಥರ ವೃಂದಾವನದ ಎಡಮುಗ್ಗಲಲ್ಲಿದೆ.

## ೧೦ ಕುಷ್ಠರೋಗ ನಿವಾರಣೆ.

ಶ್ರೀಪಾದರಾಜರಿಗೆ ಸುಖಪ್ರಾರಬ್ಧವಿತ್ತೆಂದು ಹಿಂದೆ ಹೇಳಿರುವೆವಷ್ಟೆ? ಅದರಿಂದಲವರು ಬೇಕಾದಂಥ ಸುಗಂಧ ತೈಲಗಳನ್ನು ಲೇಪನ ಮಾಡಿಕೊಂಡು ಅಭ್ಯಂಗನ ಮಾಡಿಕೊಳ್ಳುತ್ತಿದ್ದರು. ದಿನಾಲು ಅರವತ್ತು

ನಾಲ್ಕು ಬಗೆಯ ಭಕ್ಷ್ಯ-ಭೋಜ್ಯಗಳನ್ನೂ, ಶಾಕ-ಪಾಕಾದಿಗಳನ್ನೂ ಭೋಜನ ಮಾಡುತ್ತಿದ್ದರು ಮನಸ್ಸಿಗೆ ಬಂದ ವಿಲಾಸಗಳನ್ನು ಭೋಗಿಸುತ್ತಿದ್ದರು. ಇದನ್ನು ಕಂಡು ನಮ್ಮಂಥ ಅಹಂಮನ್ಯಪಂಡಿತರು ಕೆಲವರು: ಏನಿದು? ಯತಿಗಳಲ್ಲಿ ವಿಚಾರವೇ ಇಲ್ಲ. ಸುಖಪ್ರಾರಬ್ಧವೆಂಬ ನೆವಮಾಡಿಕೊಂಡು ಯತ್ಯಾಶ್ರಮಕ್ಕೆ ಅನುಚಿತವಾದ ಕರ್ಮಗಳನ್ನೆಲ್ಲ ಮಾಡುತ್ತಿರುವರು. ಇಂಥ ಯತ್ಯಾಶ್ರಮವನ್ನು ಬೇಕಾದವರು ಸ್ವೀಕಾರ ಮಾಡಬಹುದು. ಇವರೆಲ್ಲಿಯ ಯತಿಗಳು? ಎಲ್ಲಿಯ ಸಾಧುಗಳು? ಹೀಗೆಂದು ಪರಿಪರಿಯಿಂದ ನಿಂದೆ ಮಾಡಿದರು ಇದು ಶ್ರೀಪಾದರಾಯರಿಗೆ ತಿಳಿಯಲಿಲ್ಲವೆಂತಲ್ಲ. ಒಂದೆರಡು ಸಾರೆ ಅವರೇ ಪ್ರತ್ಯಕ್ಷ ಕಿವಿಯಿಂದಲೂ ಕೇಳಿದರು. ಆದರೇನು? ಪರಮಯೋಗೀಶ್ವರರೂ, ಸಮಸ್ತ ಜೀವಜಂತುಗಳಲ್ಲಿಯೂ ಪರಮಾತ್ಮನ ಸ್ವರೂಪವನ್ನೇ ಕಾಣತಕ್ಕಂಥವರೂ ಆದ ಮಹಾತ್ಮರಿಗೆ ಯಾರ ನಿಂದೆ-ಸ್ತುತಿಗಳಿಂದೇನು? ಅವರಿಗೆ ಎರಡೂ ಅಷ್ಟೇ. ದುಃಖವೂ ಇಲ್ಲ; ಸಂತೋಷವೂ ಇಲ್ಲ ಶ್ರೀ ಪುರಂದರದಾಸರು ಹೇಳಿದಂತೆ—

"ಹಿಂದಾಡಿಕೊಂಬುವರ ಮುಂದೆ ಕರಿಯಲಿ ಬೇಕು| ನಿಂದಿಸುವವರ ಕೂಡ ಬೆರಿಯಬೇಕು || ನಿಂದನಿಲವಿಗೆ ಸೇರದವರ ಕೂಡುಣಬೇಕು | ಕೊಂದವನ ಗೆಳೆತನವ ಮಾಡಬೇಕಯ್ಯಾ||"

ಧರ್ಮವೇ ಜಯವೆಂಬೆ| ದಿದು ದಿವ್ಯಮಂತ್ರಾ ||

ಇಂಥಾ ಉದಾತ್ತಧ್ಯೇಯವುಳ್ಳವರು. ಸ್ವಯಮೇವ ನಿಂದೆಯನ್ನು ಕೇಳಿದರೂ ಎಲ್ಲವೂ ಶ್ರೀಶೇಚ್ಛಾ ಆತನ ಮನಸಿಗೆ ಬಂದಂತಾಗಲಿ, ಎಂದು ನುಡಿದು ಸುಮ್ಮನಾದರು. ಇವರು ಸುಮ್ಮನಾದರೂ ಇವರ ಭಾಗದ ಸ್ವಾಮಿಯು ಹೇಗೆ ಸುಮ್ಮನಾದಾನು? ತನ್ನ ಭಕ್ತರ ನಿಂದೆಯನ್ನು ಕೇಳಿ ಹೇಗೆ ಸಹಿಸಿಕೊಂಡಾನು? ಸಹಿಸಲಿಲ್ಲ. ಕೂಡಲೆ ನಿಂದೆ ಮಾಡಿದವರೆಲ್ಲರಿಗೂ ಕುಷ್ಠರೋಗವು ಉತ್ಪನ್ನವಾಯಿತು. 'ಮಾಡಬಾರದ್ದನ್ನು ಮಾಡಿದರೆ, ಆಗಬಾರದ್ದು ಆಗುವದು' ಎಂಬ ಮಾತು ಸುಳ್ಳಲ್ಲ. ಲೋಕದಲ್ಲಿ ಸಾಮಾನ್ಯ ಜನನಿಂದೆಯೇ ನರಕದ ಬಾಗಿಲವನ್ನು ತೆರೆಯುವದಕ್ಕೆ ಕಾರಣವಾಗಿರಲು, ಮಹಾತ್ಮರಾದ ಸಾಧು-ಸತ್ಪುರುಷರ ನಿಂದೆಯಂತೂ ಇನ್ನೆಷ್ಟು ಮಹಾನರ್ಥಕ್ಕೆ ಕಾರಣವಾದೀತೆಂದು ಹೇಳೋಣ? ವಿಜಯದಾಸರನ್ನು ನಿಂದಿಸಿದ್ದರಿಂದಲೇ ಅಲ್ಲವೇ ಜಗನ್ನಾಥದಾಸರು ಕ್ಷಯ

ರೋಗಿಗಳಾದದ್ದು? ರಾಮದಾಸರಂಥ ಅನೇಕ ಹರಿಶರಣರ ಮುಖಭಂಗಿತ ಮಾಡಹೋದದ್ದರಿಂದಲ್ಲವೇ? ಜಯವೆಂಕಟಾಚಾರ್ಯರು ಬ್ರಹ್ಮರಾಕ್ಷಸ ಜನ್ಮವನ್ನು ಪಡೆದದ್ದು? ಅದರಂತೆ ಇಲ್ಲಿಯೂ ಶ್ರೀಪಾದರಾಯರ ನಿಂದೆ ಮಾಡಿದವರು ಕುಷ್ಟರೋಗಿಗಳಾದರು. ಕಂಡವರೆಲ್ಲರೂ ಉಡಿಯಲ್ಲಿ ಕೆಂಡವನ್ನು ಕಟ್ಟಿಕೊಂಡಂತೆ, ದೊಡ್ಡವರ ನಿಂದೆ ಮಾಡಿ ಇಂಥ ದ್ರೋಹ ವನ್ನು ಕಟ್ಟಿಕೊಂಡರೆಂದು ಛೀ-ಥೂ ಮಾಡಹತ್ತಿದರು. ಇನ್ನು ಕೆಲವರು, ಹನುಮಂತನ ಮುಂದೆ ಹಾರಗುಬ್ಬಿ ಎಂದ ಹಾಗೆ ಅಂಥಾ ದೊಡ್ಡವರ ಮಾತು ನಿಮಗೇಕೆ ಬೇಕಾಗಿತ್ತೆಂದು ಅವರ ಮೋರೆಯ ಮೇಲೆ ಉಗು ಳಿದರು. 'ಕೆಟ್ಟ ಮೇಲೆ ಬುದ್ಧಿ ಬಂತು' ಎಂಬಂತೆ ಆಗ ಅವರಿಗೆ ನಿಚ್ಚಳ ವಾಗಿ ಕಣ್ಣು ತೆರೆದವು. ಹೋದವರೇ ಶ್ರೀಪಾದರಾಯರಿಗೆ ಸಾಷ್ಟಾಂಗ ವಾಗಿ ಎರಗಿ:—"ಸ್ವಾಮಿ, ಗುರುವರ್ಯ! ಮಹಾನುಭಾವಾ! ಮಂದ ಮತಿಗಳಾದ ನಮ್ಮಿಂದ ಸನ್ನಿಧಿಯಲ್ಲಿ ಮಹಾಪರಾಧವಾಗಿರುವದು. ಮಕ್ಕ ಳನ್ನು ತಂದೆ-ತಾಯಿಗಳು ಕ್ಷಮಿಸುವ ಹಾಗೆ, ನಮ್ಮ ಅಪರಾಧವನ್ನು ಕ್ಷಮಿಸಿ, ಕೃಪಾಪೂರ್ಣದೃಷ್ಟಿಯಿಂದ ನೋಡುವದಾಗಬೇಕು." ಹೀಗೆಂದು ಪರಿಪರಿಯಿಂದ ಅಂಗಲಾಚಿ ಬೇಡಿಕೊಳ್ಳಹತ್ತಿದರು. ಸತ್ಪುರುಷರ ಹೃದ ಯವು ಇನ್ನೆಷ್ಟು ಕೋಮಲವಾದದ್ದೋ! ಎಷ್ಟು ಔದಾರ್ಯವುಳ್ಳದ್ದೋ ತಿಳಿಯದು. ಮೊದಲು ತಮ್ಮನ್ನು ಬಗೆಬಗೆಯಿಂದ ನಿಂದೆ ಮಾಡಿದ್ದರೂ ಈಗ ಬೇಡಿಕೊಂಡ ಕೂಡಲೆ ಶ್ರೀಪಾದರಾಯರ ಅಂತಃಕರಣವು ಕರಗಿ ಹೋಯಿತು. ಮರುದಿವಸ ದೇವತಾರ್ಚನೆಯ ಕಾಲಕ್ಕೆ ಅವರೆಲ್ಲರಿಗೂ ಬರಹೇಳಿ ಶಂಖೋದಕವನ್ನು ಪ್ರೋಕ್ಷಿಸಿದರು. ಕುಷ್ಠರೋಗವು ಹೇಳ ಹೆಸರಿಲ್ಲದಂತಾಗಿ ಎಲ್ಲರೂ ಮುನ್ನಿನಂತಾದರು. ನೆರೆದವರೆಲ್ಲರೂ ಈ ಅದ್ಭುತಮಹಿಮೆಯನ್ನು ಕಣ್ಣಾರೆ ಕಂಡು, ಏನು ನಮ್ಮ ಗುರುಗಳ ಮಾಹಾತ್ಮ್ಯವೋ! ಎಂದು ಅವರನ್ನು ಕೊಂಡಾಡಹತ್ತಿದರು. ಕುಷ್ಠರೋಗ ವನ್ನು ಕಳಕೊಂಡವರಂತೂ ಗುರುಗಳ ಪಾದತಲದಲ್ಲಿ ಬಿದ್ದು ಹೊರಳಾಡಿ ಶೇಷಾಯುಷ್ಯವನ್ನು ಅವರ ಸೇವೆಯಲ್ಲಿಯೇ ಕಳೆದರು.

ಇದೇ ರೀತಿ ಮತ್ತೊಮ್ಮೆ ಕೆಲವು ಕುಹಕರು, ದಿನಾಲು ಪಂಚ ಭಕ್ಷ್ಯಪರಮಾನ್ನವನ್ನು ಹೊಡೆಯುವ ಇವರೆಂಥ ಯತಿಗಳೆಂದು ಹಾಸ್ಯ ಮಾಡಿದರು. ಆಗ ಶ್ರೀಪಾದರಾಯರು ಅವರ ಮಾತಿಗೆ ಸುಮ್ಮನೆ ಇದ್ದು,

ಮುಂದೆ ಹಿಂದಾನೊಂದು ದಿವಸ ಊಟ ಮಾಡಿದ ಮೇಲೆ ಹೊಟ್ಟೆಯೊಳ ಗಿಂದ ಊಟ ಮಾಡಿದ ಎಲ್ಲ ಹಸೀ ಪದಾರ್ಥಗಳನ್ನು ಹಾಗೇವೇ ಹೊರಗೆ ತೆಗೆದಿಟ್ಟು, ಪುನಃ ಅವನ್ನು ಹೊಟ್ಟೆಯೊಳಗಿರಿಸಿದಂತೆ ಇದನ್ನು ನೋಡಿ ಮೊದಲು ಹಾಸ್ಯಮಾಡಿದ ಕುಹಕರೆಲ್ಲರೂ ಗಲ್ಲ ಗಲ್ಲ ಬಡಿದುಕೊಂಡು ಶ್ರೀಪಾದರಾಯರಲ್ಲಿ ಕ್ಷಮೆಯನ್ನು ಯಾಚಿಸಿದರು.

ಈ ಮಾತನ್ನು ಶ್ರೀ ನಿಧಿತೀರ್ಥರು ಹೀಗೆ ಬಣ್ಣಿಸಿದರು:—

“ಶ್ರೀಗೋಪಿಕಾಪತಿನಿವೇದಿತ ಷಷ್ಟಿಶಾಕ ಮುಖ್ಯೋರುಭೋಜನ
ವಿದೂಷಣ ತತ್ಪರಾಣಾಂ ||
ಸಂದರ್ಶಿತೋರುನಿಜಕುಕ್ಷಿಗತಾದ್ರ್ರಶಾಕ ಶ್ರೀಪಾದರಾಜ ಗುರ
ವೇಸ್ತು ನಮಃ ಶುಭಾಯ||”
(ಶ್ರೀಪಾದರಾಜಾಷ್ಟಕ)

ಅಲ್ಲದೆ—ಇವರ ಶಿಷ್ಯರಾದ ಶ್ರೀವ್ಯಾಸರಾಯರೂ ಕೂಡ ತಮ್ಮದೊಂದು ಪದ್ಯದಲ್ಲಿ ಹೀಗೆ ಹೇಳಿಕೊಂಡಿರುವರು:—

“ಹರಿಗೆ ಸಮರ್ಪಿಸಿದ ನಾನಾ | ಪರಿಯಶಾಖಗಳನ್ನು ಭುಂಜಿಸೆ ||
ನರರು ನಗಲು ಶ್ರೀಕೃಷ್ಣನ | ಕರುಣದಿಂದಹುಸಿಯು ಮಾಡಿದ||”
ಮಹಿಮೆ ಸಾಲದೇ | ಇಷ್ಟೇ ಮಹಿಮೆ ಸಾಲದೆ || ಪ ||

ಲೋಕದಲ್ಲಿ ನಿಂದೆಯು ಸುಡಿಯೆಂಬುದೇ ಕೆಟ್ಟದು. ಅದರಲ್ಲಿ ಮಹ ನ್ನೀಯರ ನಿಂದೆಯನ್ನಂತೂ ಸರ್ವಥಾ ಮಾಡಕೂಡದು. ಅವರು ತೋ ರಿಕೆಯಲ್ಲಿ ಹೇಗೇ ಇರಲಿ, ಏನೇ ಮಾಡಲಿ, ಅಂತರಂಗಶುದ್ಧಿಯುಳ್ಳ ವರೂ ನಿರ್ಮಲಚಿತ್ತರೂ ಆಗಿರುವದರಿಂದ ಭಗವಂತನಿಗೆ ಪ್ರಿಯರಾಗಿರು ವರು. ಅಂಥವರ ನಿಂದೆ ಮಾಡೋಣವೆಂದರೆ ಭಗವಂತನನ್ನು ನಿಂದಿಸಿ ದಂತೆಯೇ ಸರಿ. ಆದ್ದರಿಂದಲೇ ಶ್ರೀಪುರಂದರದಾಸರು—

“ದಾಸರ ನಿಂದಿಸಬೇಡ | ಮನವೇ | ಹರಿದಾಸರ ನಿಂದಿಸಬೇಡ||”
ಎಂಬದಾಗಿ ಕೂಗಿಕೊಂಡಿದ್ದಾರೆ.



# ೧೧ ದೃಢ ಚಿತ್ತ.

ಹಿಂದಾನೊಂದು ದಿವಸ ಶ್ರೀಪಾದರಾಯರು ಊರೊಳಗೆ ಬೀದಿಯಲ್ಲಿ ಬರುತ್ತಿರುವಾಗ್ಗೆ ಎದುರಿಗೆ ಬಂದ ಒಬ್ಬ ವೇಶ್ಯಾಸ್ತ್ರೀಯಳನ್ನು ಏಕದಾ ಆಲಿಂಗನ ಮಾಡಿಕೊಂಡುಬಿಟ್ಟರು. ಆಯ್ಯೋ! ಇದೇನು? ಶ್ರೀಪಾದರಾಯರಂಥ ಮಹಾನುಭಾವರಾದ ಯತಿಗಳೂ ಕೂಡ ವಿಷಯ ವ್ಯಾಮೋಹಕ್ಕೆ ಸಿಕ್ಕು ಇಂದ್ರಿಯ ಚಾಪಲ್ಯವನ್ನು ತೃಪ್ತಿಪಡಿಸಿದರಲ್ಲಾ! ಎಂಬದಾಗಿ ಜನರು ತಂಡ ತಂಡವಾಗಿ ನೆರೆದು ಗುಜು ಗುಜು ಮಾತನಾಡಹತ್ತಿದರು. ಮತ್ತು ಯತಿಧರ್ಮಕ್ಕೆ ಅನುಚಿತವಾದ ಕಾರ್ಯಗಳನ್ನು ಮಾಡುತಾರೆಂದೂ ಸಿದ್ಧಾಂತ ಮಾಡಿದರು. ನಮ್ಮಂಥ ಚಿತ್ತಚಾಂಚಲ್ಯವುಳ್ಳವರ ಮಾತೇ ಇಷ್ಟು. ನಮ್ಮಲ್ಲಿ ಹೊಗಳುವದಕ್ಕೂ ತಡವಾಗದು; ಬೊಗಳುವದಕ್ಕೂ ತಡವಾಗದು. ಈ ಶ್ರೀಪಾದರಾಯರಂತೂ ಇರಲಿ, ಸಾಕ್ಷಾತ್ ಪರಮಾತ್ಮನನ್ನೇ ಕ್ಷಣದಲ್ಲಿ ಸ್ತೋತ್ರ ಮಾಡುವೆವು; ಮತ್ತೊಂದರ ಕ್ಷಣದಲ್ಲಿ (ನಮ್ಮ ಮನಸ್ಸಿನಂತೆ ಕಾರ್ಯವಾಗದಿದ್ದಾಗ) ತಿರಸ್ಕರಿಸಿ ಬಿಡುವೆವು. ಇಂಥ ಮಂದಮತಿಗಳಾದ ನಾವು ದೃಢಚಿತ್ತವುಳ್ಳವರ ಲೀಲಾವಿನೋದಗಳನ್ನು ತಿಳಿಯಲಿಕ್ಕೆ ಹೇಗೆ ಸಮರ್ಥರಾದೇವು? ಶ್ರೀಪಾದರಾಯರು ವೇಶ್ಯೆಯನ್ನು ರಾಜಬೀದಿಯಲ್ಲಿ ಯಾವಾಗ ಆಲಿಂಗನ ಮಾಡಿಕೊಂಡರೋ ಆಗಲೇ ಜನ ಜಾತ್ರೆ ಕೂಡಿತು. ಅವರಲ್ಲಿ ಎಷ್ಟೋ ಜನರು ಇವರೆಂಥ ಸಾಧುಗಳು? ಕಾರ್ಯಸಾಧುಗಳೇ ಸರಿಯೆಂದೂ, ಮತ್ತೆಷ್ಟೋ ಜನರು ಶ್ರೀ ಕೃಷ್ಣನು ಗೋಕುಲದಲ್ಲಿ ಗೋಪಿಯರೊಡನೆ ಲೀಲಾ ಮಾಡಿದಂತೆ ಇದೊಂದು ಬಗೆಯ ಅವರ ಲೀಲೆಯೆಂದೂ, ಇನ್ನೆಷ್ಟೋ ಜನರು ಎಷ್ಟೋ ತೆರನಾಗಿಯೂ ಮಾತನಾಡಿಕೊಳ್ಳುತ್ತಿದ್ದರು. ಜನರ ಬಾಯಿ ಮುಚ್ಚುವವರಾರು? ಸತ್ವ-ರಜ-ತಮೋಗುಣಗಳುಳ್ಳ ತ್ರಿವಿಧ ಜೀವಿಗಳೂ ತಮ್ಮ ತಮ್ಮ ಗುಣಕರ್ಮಗಳಿಗೆ ಸರಿಯಾಗಿ ಮಾತನಾಡಿಕೊಳ್ಳುತ್ತಿದ್ದರೆಂದೂ ಹೇಳಬಹುದು. ಹೀಗೆ ಜನಜಾತ್ರೆಯು ಶ್ರೀಪಾದರಾಯರ ಬೆನ್ನ ಹತ್ತಿ ನಡೆದಿತ್ತು. ಅಷ್ಟರಲ್ಲಿ ತುಸ ಮುಂದಕ್ಕೆ ಹೋಗಲು, ಅದೇ ಬೀದಿಯಲ್ಲಿ ಒಬ್ಬ ಕಮ್ಮಾರನು ಕುಲಿಮೆಯಲ್ಲಿ ದೊಡ್ಡದೊಂದು ಕುಡವನ್ನು ಕಾಯಲಿಕ್ಕೆ ಹಾಕಿದ್ದನು. ಅದು ಕಾದು ಕಾದು ನಿಗಿ ನಿಗಿ ಕೆಂಡದಂತಾ

ಗಿತ್ತು. ಕಮ್ಮಾರನು ಇನ್ನು ಅದನ್ನು ಹೊರಗೆ ತೆಗೆದು ಬಡಿಯುತಕ್ಕವನು; ಅದೇ ಸಮಯಕ್ಕೆ ನಮ್ಮ ಶ್ರೀಪಾದರಾಯರು ಹೋದವರೇ ಆ ಕೆಂಡದಂತಿದ್ದ ಕುಡವನ್ನು ಸರಕ್ಕನೇ ಹಿರಿದು ಮೈಮೇಲೆಲ್ಲ ಹಿತ್ತಿಕೊಂಡರು. ಅಹಹಾ! ಅದನ್ನೆಲ್ಲ ಕಣ್ಣಾರೆ ಕಂಡ ಆಗಿನ ಜನರ ಸ್ಥಿತಿಯನ್ನು ಏನೆಂದು ಹೇಳೋಣ! ಇಲ್ಲಿಯ ವರೆಗೆ ಇವರೊಬ್ಬರು ಕಾರ್ಯಸಾಧುಗಳೆಂದು ಯಾರು ತಿರಸ್ಕರಿಸುತ್ತಿದ್ದರೋ ಅವರು ಇದನ್ನು ನೋಡಿ ಬೆಪ್ಪಾಗಿ ಕುಳಿತುಬಿಟ್ಟರು! ಮಾತಾಡಲಿಕ್ಕೆ ಬಾಯೇ ಇಲ್ಲ. ಪ್ರತ್ಯಕ್ಷ ಅಗ್ನಿಯನ್ನೇ ಅಪ್ಪಿಕೊಂಡಂಥ ಮಹಾನುಭಾವರಿಗೆ ಏನೆಂದು ಹೆಸರಿಡಬೇಕು? ಆಗ ಎಲ್ಲರೂ ಏಕಕಂಠದಿಂದ ಗುರುಗಳ ಜಯಜಯಕಾರಮಾಡಿ ಇವರು ನರರಲ್ಲ-ಸುರರೇ ಸರಿ! ಎಂದು ಕೊಂಡಾಡಿದರು.

ದೇಹಾಭಿಮಾನವನ್ನು ಬಿಟ್ಟಂಥ ಮಹಾ ಯೋಗಿಗಳಿಗೆ ಸುಖ-ದುಃಖಾದಿಗಳ ಲೇಪವೇ ಇಲ್ಲ. ಅವರಿಗೆ ಇಲಿಯೂ ಅಷ್ಟೆ, ಹುಲಿಯೂ ಅಷ್ಟೆ. ಬೆಂಕಿಯೂ ಹಿಂದೇ; ಬರ್ಫವೂ ಹಿಂದೇ. ಆದರೆ ಇದು ಬಾಯಿಂದ ಹೇಳಲಿಕ್ಕೆ ಸುಲಭವೇ ಹೊರತು, ಅಂಥಾ ದೃಢ ಚಿತ್ತವನ್ನು ಸಂಪಾದಿಸುವದು ಪರಮ ದುರ್ಲಭವಾದದ್ದು. ಯಾರು ಇಂತಹ ದೃಢ ಚಿತ್ತವನ್ನು ಸಂಪಾದಿಸುವರೋ ಅವರೇ ನಿಜವಾದ ಯೋಗಿಗಳು. ಸತ್ಪುರುಷರು. ಭಗವದನುಗ್ರಹಕ್ಕೆ ಪಾತ್ರರು.

ಆದವಾನಿಯಲ್ಲಿ ಪರಿಗಾನಾಮ ತಿಮ್ಮಣ್ಣ ದಾಸರೆಂಬ ಮಹಾ ಭಗವದ್ಭಕ್ತರೊಬ್ಬರಿದ್ದರು. ಅವರು ವಿಶೇಷವಾಗಿ ಜನರ ಕೂಡ ಮಾತನಾಡುತ್ತಿದ್ದಿಲ್ಲ. ಆದರಿಂದ ಕೆಲವರು ಕುಹಕರು| ಕೂಡಿ ದಾಸರ ನೀರಿನವನನ್ನು ತಮ್ಮ ಕಡೆಗೆ ಹಿಡಿದುಕೊಂಡು ಹಿಂದಾನೊಂದು ದಿವಸ ಅವರು ಸ್ನಾನ ಮಾಡುವ ನೀರನ್ನು ಎಸರು ಬರುವ ಹಾಗೆ ಕಾಯಿಸಿ ಇಡಿಸಿ ಬಿಟ್ಟಿದ್ದರು. ಪಾಪ! ದಾಸರಿಗೆ ಇದಾವುದೂ ಗೊತ್ತಿಲ್ಲ. ಅವರು ಬಂದವರೇ ಆ ಎಸರು ಬಂದು ಕುದಿಯುವ ನೀರನ್ನೇ ಸ್ನಾನಮಾಡಿಬಿಟ್ಟರು. ತತ್ಕ್ಷಣ ಕುಹಕರ ಮೈತುಂಬ ಗುಳ್ಳಿಗಳೆದ್ದು ಅವರು ಬಾಯಿ ಬಾಯಿ ಬಡಕೊಳ್ಳಹತ್ತಿದರು. ಆಗ ದಾಸರಿಗೆ ಇವರು ಮಾಡಿದ ಆಟವು ತಿಳಿಯಬಂತು. ಆದರೂ ಅವರು ಅಂತಃಕರಣದಿಂದ ತಮ್ಮದೊಂದು ಹಿದ್ದೆಯ ಅರಿವೆಯನ್ನು ಕೊಟ್ಟು ಇದರಿಂದ ಹಿರಿಸಿಕೊಳ್ಳಿರೆಂದು ಹೇಳಲು, ಅವರ ಮೈ ಮೇಲಿನ ಗುಳ್ಳೆಗಳೆಲ್ಲ

ಮಾಯವಾದವು!

ಹಿಂದಕ್ಕೊಮ್ಮೆ ಜನಕಮಹಾರಾಜನು ಭಾಗವತ ಸಪ್ತಾಹ ಕೇಳಬೇಕೆಂದು ಯೋಚಿಸಿ ಗಂಗಾತೀರದಲ್ಲಿ ದೊಡ್ಡದೊಂದು ಚಪ್ಪರವನ್ನು ಹಾಕಿಸಿದನು. ಸನತ್ಕುಮಾರರು ಪುರಾಣವನ್ನು ಹೇಳಲಿಕ್ಕೆ ಪ್ರಾರಂಭ ಮಾಡಿದರು. ಜನಕನು ನಿಂತುಕೊಂಡೇ ಬಹು ಭಕ್ತಿಯಿಂದ ಆಲಿಸುತ್ತಿದ್ದನು. ಪುರಾಣಶ್ರವಣಕ್ಕೆ ಸಾವಿರಾರು ಜನರು ದಿನಾಲು ಕೂಡುತ್ತಿದ್ದರು. ಹೀಗೆ ನಡೆಯುತ್ತಿರುವಾಗ್ಗೆ ಒಂದು ದಿವಸ ಪರಮಾತ್ಮನು ಇಲ್ಲಿ ಕೂಡುವ ಜನಗಳ ಚಿತ್ತಪರೀಕ್ಷೆ ಮಾಡಬೇಕೆಂದು ಯೋಚಿಸಿ ಪುರಾಣವು ನಡೆಯುತ್ತಿರುವ ಕಾಲದಲ್ಲಿ ಒಮ್ಮಿಂದೊಮ್ಮೆ ಚಪ್ಪರಕ್ಕೆ ಬೆಂಕಿಯನ್ನು ಹಚ್ಚಿಸಿಬಿಟ್ಟನು! ಕೂಡಲೆ ಶ್ರೋತೃಗಳೆಲ್ಲರೂ ಕಕ್ಕಾವಿಕ್ಕಿಯಾಗಿ ದಿಕ್ಕು ದಿಕ್ಕಿಗೆ ಓಡಹತ್ತಿದರು; ಮತ್ತು ಚಪ್ಪರವು ಸುಡಹತ್ತಿದೆ, ತಾವು ಹೊರಗೆ ಬರಬೇಕೆಂದು ಜನಕರಾಜನನ್ನೂ, ಪುರಾಣವನ್ನು ಸಾಕುಮಾಡಿರೆಂದು ಸನತ್ಕುಮಾರರನ್ನೂ ಬೇಡಿಕೊಳ್ಳಹತ್ತಿದರು. ಜನಕನೂ ಸನತ್ಕುಮಾರರೂ ಇವರಿಬ್ಬರೂ ಅವರ ಮಾತನ್ನು ಲಕ್ಷಿಸಲೇ ಇಲ್ಲ. ಹಾಗೆಯೇ ಕುಳಿತುಬಿಟ್ಟರು. ತಾಸೆರಡು ತಾಸಿನಲ್ಲಿ ಚಪ್ಪರವೆಲ್ಲ ಭಸ್ಮೀಭೂತವಾಗಿ ಹೋಯಿತು. ಆ ಮೇಲೆ ಉರಿಯೆಲ್ಲ ಶಾಂತವಾಗಲು, ಜನಕನೂ ಸನತ್ಕುಮಾರರೂ ಸುಟ್ಟುಕೊಂಡು ಸತ್ತಿರುವರೆಂದೇ ತಿಳಿದು ಶ್ರೋತೃಗಳು ನೋಡಲಿಕ್ಕೆ ಬಂದರು. ಆಹಾ! ಆಗಿನ ಚಮತ್ಕಾರವನ್ನು ಏನೆಂದು ಹೇಳೋಣ! ಸನತ್ಕುಮಾರರು ಪುರಾಣವನ್ನು ಹೇಳುತ್ತಲೇ ಇದ್ದಾರೆ. ಜನಕನು ಕೇಳುತ್ತ ನಿಂತುಕೊಂಡೇ ಇದ್ದಾನೆ. ಇದನ್ನು ನೋಡಿ ಸರ್ವರೂ ಪರಮಾಶ್ಚರ್ಯಪಟ್ಟು ನಿಮ್ಮಂಥ ದೃಢಚಿತ್ತವು ನಮ್ಮಲ್ಲಿಲ್ಲವಾದ್ದರಿಂದ ನಮಗೆ ಪುರಾಣಶ್ರವಣವು ತಪ್ಪಿತೆಂದು ಪಶ್ಚಾತ್ತಾಪ ಪಡಹತ್ತಿದರಂತೆ.

ಶ್ರೀಪಾದರಾಯರು ಇಂಥಾ ದೃಢಚಿತ್ತವುಳ್ಳವರಾದ್ದರಿಂದಲೇ ಪರಮಾತ್ಮನನ್ನು ಪ್ರತ್ಯಕ್ಷೀಕರಿಸಿಕೊಂಡರು.



# ತೃತೀಯ ಪಟಲ.

ಯಚ್ಛಿಷ್ಯೋವ್ಯಾಸರಾಜಃ ಪ್ರತಿಭಟ ಜನತಾ ಸರ್ವಗರ್ವಾಪಹರ್ತಾ|
ಕರ್ತಾ ಗ್ರಂಥತ್ರಯಸ್ಯ ಪ್ರತಿಭಟ ವಿಜಯ ಪ್ರೋಚ್ಚಶಾಸ್ತ್ರೋತ್ತಮಸ್ಯ ||
ಪ್ರಖ್ಯಾತಾಯತ್ಪ್ರಶಿಷ್ಯಾ ಜಗತಿಚವಿಜಯೀಂದ್ರಾಖ್ಯಯೋಗೀಂದ್ರಚಂದ್ರಃ|
ಶ್ರೀಮಚ್ಛ್ರೀಪಾದರಾಜ ಪ್ರಮುಖ ಯತೀವರಾಃ ಸೋವತಾನ್ಮಾಂ ಯತೀಂದ್ರ ||

(ಶ್ರೀಪಾದರಾಜಾಷ್ಟಕ.)

ಈ ಭಾಗದಲ್ಲಿ ಶ್ರೀಪಾದರಾಯರ ಕಾಲವಿಚಾರ, ಗ್ರಂಥರಚನೆ ಮೊದಲಾದವುಗಳ ಬಗ್ಗೆ ಯಥಾಮತಿ ವರ್ಣಿಸಲ್ಪಡುವದು.

೧ ಕಾಲವಿಚಾರ:—ಇವರ ಕಾಲನಿರ್ಣಯ ಮಾಡಲಿಕ್ಕೆ ಯೋಗ್ಯವಾದಂಥ ಶಿಲಾಶಾಸನಗಳಾಗಲಿ, ತಾಮ್ರಪಟಗಳಾಗಲಿ ಈ ವರೆಗೆ ಎಲ್ಲಿಯೂ ದೊರೆತಂತೆ ನಮಗೆ ತಿಳಿದು ಬಂದಿಲ್ಲ. ಇವರದೇ ಆದ ಮುಳಬಾಗಿಲಮಠದಲ್ಲಿ ಒಂದು ತಾಮ್ರಶಾಸನ ಮಾತ್ರವಿದೆ. ಅದೂ ಇವರ ಕಾಲಕ್ಕೆ ಸರಿ ಬೀಳುವದಿಲ್ಲ; ಇವರ ಹಾಗೂ ಇವರ ಶಿಷ್ಯರ ಚರಿತ್ರೆಯ ಮೇಲಿಂದ ಕೆಲಮಟ್ಟಿಗೆ ಕಾಲನಿರ್ಣಯ ಮಾಡಲನುಕೂಲವಾಗುವಂತಿದೆ. ಅದನ್ನೇ ಇಲ್ಲಿ ವಿಮರ್ಶಿಸುವೆವು.

ಕರ್ನಾಟಕ ಕುಲತಿಲಕರೂ, ವಿಜಯನಗರದ ರಾಜಗುರುಗಳೂ ಆದ ಶ್ರೀವ್ಯಾಸರಾಯರು ಇವರಲ್ಲಿ ಹನ್ನೆರಡು ವರ್ಷ ವಿದ್ಯಾಭ್ಯಾಸ ಮಾಡಿದ ರೆಂಬಂಶವು.

“ವಿದ್ಯಾಪ್ರಾಪ್ತ್ಯೈ ಕೃತೇಯತೀಶ ಮಗಮಚ್ಛ್ರೀಪಾದ ರಾಜಾಭಿದಂ|
ಹ್ಯಬ್ದಾನ್ ದ್ವಾದಶ............................................ ||”

(ಚಂದ್ರಿಕಾಚಾರ್ಯ ಚರಿತ)

“ಲಕ್ಷ್ಮೀನಾರಾಯಣಾಖ್ಯಾ ಮಲಹರಿ ಚರಣಾ ಸೇವಕಃ ಪ್ರಾಪ್ಯವಿದ್ಯಾ|
ಭಿಖ್ಯಂ ಪೂರ್ಣಮಥಾ ಸೌದ್ವಿಜ ವರಗಣಃ ಸನ್ಮಾನ್ಯತಾಮಾಜಗಾಮ ||”

* * * * * * * * * * * * * * *

ತತ್ರಾಧೀತ್ಯಂ ದ್ವಾದಶಾಬ್ದಂ ಯತೀಶಃ ಸಂಪೂರ್ಣ ವಿದ್ಯಾ ಕಲಯಾಭಿಪೂರ್ಣಃ|

ಶ್ರೀವ್ಯಾಸತೀರ್ಥಾಭಿಧಪೂರ್ಣಚಂದ್ರಃ ಕೃತಾಂಜಲಿಃಪ್ರಾಹ
ಗುರುಂ ಸುಭಕ್ತಿತಃ||"
(ವ್ಯಾಸವಿಜಯ)

ಇದರ ಮೇಲಿಂದ ಸ್ಪಷ್ಟವಾಗುತ್ತಿರುವದು. ಈ ವ್ಯಾಸರಾಯರು ಶಾ. ಶಕೆ ೧೩೬೯ರಲ್ಲಿ ಅಂದರೆ ಕ್ರಿ. ಶಕೆ ೧೪೪೭ನೇ ಪ್ರಭವ ಸಂವತ್ಸರದ ವೈಶಾಖ ಶುದ್ಧ ಸಪ್ತಮಿ ಭಾನುವಾರದಲ್ಲಿ ಅವತರಿಸಿದರೆಂದೂ, ಶಾ. ಶಕೆ. ೧೩೭೩ ರಲ್ಲಿ (೧೪೫೧) ಉಪನಯನವಾಗಿ ೧೩೭೫ರಲ್ಲಿ (೧೪೫೩) ಸಂನ್ಯಸ್ತರಾದ ರೆಂದೂ, ಈ ೧೪೫೩ ರಿಂದ೧೪೬೫ರ ವರೆಗೂ ಹನ್ನೆರಡು ವರ್ಷದ ಅವಧಿ ಯಲ್ಲಿ ವಿದ್ಯಾಭ್ಯಾಸ ಮಾಡಿದರೆಂದೂ ಶಾ. ಶಕೆ. ೧೪೬೦ರಲ್ಲಿ ಅಂದರೆ ಕ್ರಿ. ಶಕೆ. ೧೫೩೯ರಲ್ಲಿ ವೃಂದಾವನಸ್ಥರಾದರೆಂದೂ ಪಂಡಿತರು ನಿರ್ಣಯಿಸಿರು ವರು. ಈ ವಿಷಯದಲ್ಲಿ ೧೫೨೩-೧೫೨೫-೧೫೨೭ರಲ್ಲಿ ಹುಟ್ಟಿದ ತಾಮ್ರ ಶಾಸನಗಳೂ, ೧೫೧೬-೨೩-೨೫-೩೨ರಲ್ಲಿ ಹುಟ್ಟಿದ ಶಿಲಾಶಾಸನಗಳೂ ಬಲವಾದ ಪ್ರಮಾಣಗಳಾಗಿವೆ. (ಶಾಸನಗಳ ವಿಷಯವನ್ನು ಶ್ರೀ ವ್ಯಾಸ ರಾಯರ ಚರಿತ್ರೆಯಲ್ಲಿ ವಿಸ್ತಾರವಾಗಿ ಬರೆಯುವೆವು.)

ಇದು ಅಲ್ಲದೆ ಶ್ರೀಪಾದರಾಯರ ಶಿಷ್ಯಪರಂಪರೆಗೆ ಸೇರಿದ ಶ್ರೀ ನಿಧಿ ತೀರ್ಥರೆಂಬವರು ರಚಿಸಿದ ಶ್ರೀಪಾದರಾಜಾಷ್ಟಕದಲ್ಲಿ—

"ಶ್ರೀಮದ್ವೀರನೃಸಿಂಹರಾಜನೃಪತೇರ್ಭೂದೇವ ಹತ್ಯಾವ್ಯಥಾಂ |
ದೂರೀಕೃತ್ಯತದರ್ಪಿತೋಜ್ವಲಮಹಾ ಸಿಂಹಾಸನೇ ಸಂಸ್ಥಿತಃ ||
ಶ್ರೀಮತ್ಪೂರ್ವಕವಾಟನಾಮಕಪುರೆ ಸರ್ವೇಷ್ಟಸಿದ್ಧಿಪ್ರದಃ |
ಶ್ರೀ ಶ್ರೀಪಾದಯತೀಂದ್ರ ಶೇಖರಮಣಿರ್ಭೂಯಾತ್ಸನಃಶ್ರೇಯಸೆ||"

ಹೀಗೆ ಹೇಳಿಕೊಂಡಿರುತ್ತಾರೆ. ಇದರ ಮೇಲಿಂದ—ಶ್ರೀಪಾದರಾಯರು ವಿಜಯನಗರದ ವೀರನರಸಿಂಹರಾಜನಿಂದ (೧೫೦೫-೧೫೦೯) ಮನ್ನಣೆ ಹೊಂದಿದ್ದರೆಂಬಂಶವು ಗೊತ್ತಾಗುವದು.

ಇನ್ನು ಶ್ರೀಪಾದರಾಜರ ಚರಿತ್ರದ ಮೇಲಿಂದಲೇ ಕೆಲವು ಸಂಗತಿ ಗಳು ತಿಳಿದು ಬರುವವು, ಅವಾವೆಂದರೆ:—

೧ ಶ್ರೀಪಾದರಾಯರ ಆಶ್ರಮಗುರುಗಳು ಸ್ವರ್ಣವರ್ಣತೀರ್ಥರು. ಇವರು ವಿಜಯನಗರದ 'ವಿಜಯ ವೆಂಕಟಪತಿ'ಯೆಂಬ ರಾಜನಿಗಿದ್ದ ಮಹಾ ವ್ಯಾಧಿಯನ್ನು ಪರಿಹಾರ ಮಾಡಿದ್ದರಿಂದ ರಾಜರು ಇವರಿಗೆ ಬಹು ರಾಜ

ಮರ್ಯಾದೆಗಳನ್ನು ಕೊಟ್ಟಿದ್ದಲ್ಲದೆ 'ವೆಂಗೆರೆ' ಎಂಬ ಗ್ರಾಮವನ್ನು ಇನಾಮಾಗಿ ಕೊಟ್ಟನಂತೆ. ಈ ಬಗ್ಗೆ ಮುಳಬಾಗಿಲ ಮಠದಲ್ಲಿ ಶಾಸನವಿರುವದೆಂದೂ ಹೇಳುತ್ತಾರೆ. ಈ ವಿಜಯವೆಂಕಟಪತಿಯ ಕಾಲವೆಂದರೆ, ಕ್ರಿ. ಶ. ೧೪೨೨-೧೪೨೩.

೨ ಇವರು ವಿದ್ಯಾಭ್ಯಾಸ ಮಾಡಿದ್ದು ಶ್ರೀಮನ್ಮಂತ್ರಾಲಯ ಮಠದ ಸ್ಥಾಪಕರಾದ ಶ್ರೀ ವಿಬುಧೇಂದ್ರತೀರ್ಥರೆಂಬ ಪ್ರಸಿದ್ಧ ವಿದ್ವಾಂಸರ ಬಳಿಯಲ್ಲಿ. ಈ ವಿಬುಧೇಂದ್ರರ ಕಾಲವೆಂದರೆ ಕ್ರಿ. ಶ. ೧೪೩೬-೧೪೮೬.

೩ ಶ್ರೀಪಾದರಾಯರ ತಾಯಿಯ ಅಕ್ಕನ ಮಕ್ಕಳಾದ ಬ್ರಹ್ಮಣ್ಯತೀರ್ಥರೆಂಬವರು ವ್ಯಾಸರಾಯರನ್ನು ಸಂರಕ್ಷಿಸಿ ಶ್ರೀಪಾದರಾಯರಲ್ಲಿ ವಿದ್ಯಾಭ್ಯಾಸಕ್ಕಿಟ್ಟರೆಂದೂ, ಈ ಮೂವರೂ ಯತಿಗಳು ಕೂಡಿ ಕೆಲ ಕಾಲ ದೇಶಸಂಚಾರ ಮಾಡಿದರೆಂದೂ ಚರಿತ್ರವು ಹೇಳುವದು. ಈ ಬ್ರಹ್ಮಣ್ಯತೀರ್ಥರ ಕಾಲವೆಂದರೆ ಕ್ರಿ. ಶ. ೧೪೪೨-೧೪೬೭.

೪ ಉತ್ತರಾದಿಮಠದ ಶ್ರೀರಘುನಾಥ ತೀರ್ಥರೆಂಬವರು ಇವರಿಗೆ ಶ್ರೀಪಾದರಾಜರೆಂಬ ಬಿರುದು ಕೊಟ್ಟರೆಂದೂ, ಇವರಿಬ್ಬರೂ ಕೂಡಿಯೇ ಕೆಲವು ಕಾಲ ಸಂಚಾರ ಮಾಡಿದರೆಂದೂ, ಮುಂದೆ ರಘುನಾಥತೀರ್ಥರು ವೃಂದಾವನಸ್ಥರಾಗಿ ಸ್ವರ್ಗಕ್ಕೆ ತೆರಳುವಾಗ ಅವರ ವಿಮಾನವನ್ನು ಶ್ರೀಪಾದರಾಯರು ಕಂಡರೆಂದೂ ಇವರ ಚರಿತ್ರೆಯ ಮೇಲಿಂದ ತಿಳಿದು ಬರುವದು. ಈ ರಘುನಾಥತೀರ್ಥರ ಕಾಲವೆಂದರೆ ೧೪೪೪-೧೫೦೨.

ಇವೆಲ್ಲ ಸಂಗತಿಗಳ ಮೇಲಿಂದ ನೋಡಲು ಶ್ರೀಪಾದರಾಯರು ಸುಮಾರು ೧೫೦೦ರಲ್ಲಿದ್ದರೆಂದು ಹೇಳಲು ಯಾವ ಸಂದೇಹವೂ ಇಲ್ಲ.

---

೨ ಗ್ರಂಥರಚನೆ:— ಶ್ರೀಪಾದರಾಯರು ತೀರ ಚಿಕ್ಕವರಿರುವಾಗಲೇ ಸುಧಾಗ್ರಂಥವನ್ನು ಬಾಯಿಪಾಠ ಹೇಳಿ ಶ್ರೀರಘುನಾಥ ತೀರ್ಥರಿಂದ ಬಿರುದನ್ನು ಹೊಂದಿದ ಸಂಗತಿಯು ವಾಚಕರಿಗೆ ತಿಳಿದೇ ಇದೆ. ಅಂದ ಮೇಲೆ ಅವರ ಪಾಂಡಿತ್ಯದ ವಿಷಯದಲ್ಲಿ ಹೇಳಬೇಕಾದುದೇ ಇಲ್ಲ. ಅನ್ಯಾದೃಶವಾದ ಪಾಂಡಿತ್ಯವನ್ನು ಸಂಪಾದಿಸಿದ್ದರು. ಆದರೂ ಇವರು ಸಂಸ್ಕೃತದಲ್ಲಿ ಬರೆದ ಗ್ರಂಥಗಳು ಯಾವವೂ ಪ್ರಕಟವಾಗಿಲ್ಲ. ಬಹು ಅಮೌಲ್ಯವಾದ 'ವಾಗ್ವಜ್ರ'ವೆಂಬ ಗ್ರಂಥವೊಂದನ್ನು ಮಾತ್ರ ಬರೆದರೆಂಬುದು ಶ್ರೀನಿಧಿತೀರ್ಥರು ರಚಿಸಿದ ಶ್ರೀಪಾದರಾಜಾಷ್ಟಕದ

"ಯದ್ವಾಗ್ವಜ್ರಾಭಿಧೋಚ್ಚ ಪ್ರಬಲ ತಮ ಮಹಾಗ್ರಂಥವಜ್ರೇಣ
ಹೃಷ್ಯ |
ದ್ದುರ್ವಾದಿಕ್ಷ್ಮಾಧರಾಣಾಂ ಯತಿವರಸುರಪಶ್ಛೇದ ಯಾ ಮಾಸ
ಪಕ್ಷಾನ್||
ಯಸ್ಯಶ್ರೀ ವ್ಯಾಸರಾಜ ಪ್ರಮುಖಯತಿವರ್ಯೈರ್ವರ್ಣಿತಂ ಸ್ವೈವಶಕ್ತ್ಯಂ |
ಮಾಹಾತ್ಮ್ಯಂತಾಪಸೇಂದ್ರಃ ಸಭವತುನಿತರಾಂ ಭೂಯಸೆ ಶ್ರೀಯ
ಸೇಮೇ|| "

ಈ ಶ್ಲೋಕದ ಮೇಲಿಂದ ತಿಳಿಯುತ್ತದೆ. ಈ ಗ್ರಂಥವಾದರೂ ಇದು ವರೆಗೆ ಪ್ರಚುರವಾಗಿಲ್ಲ. ಶ್ರೀಪಾದರಾಯರು ಇದನ್ನು ಬರೆದ ಮೇಲೆ ಅವರ ಶಿಷ್ಯರಾದ ವ್ಯಾಸರಾಯರು—ನ್ಯಾಯಾಮೃತ, ಚಂದ್ರಿಕಾ, ತರ್ಕ ತಾಂಡವ ಎಂಬ ೩ ಅದ್ಭುತ ಗ್ರಂಥಗಳನ್ನು (ಇವಕ್ಕೇ ವ್ಯಾಸತ್ರಯ ವೆನ್ನುವರು) ಬರೆದು ಗುರುಗಳಿಗೆ ಅರ್ಪಿಸಿದರು. ಅವುಗಳನ್ನು ನೋಡಿ ಶ್ರೀಪಾದರಾಯರು ಈ ಗ್ರಂಥಗಳು ಬಹಳ ಚನ್ನಾಗಿವೆ, ಇವೇ ಪ್ರಕಟವಾ ಗಲಿ ಎಂದು ಹೇಳಿ ತಮ್ಮ ಗ್ರಂಥವನ್ನು ಹಿಂದಕ್ಕಿಟ್ಟು ಬಿಟ್ಟರಂತೆ. ಈಗೆ ಲೀಗ ಕೆಲವರು ಅಚ್ಚುಮಾಡಿಸಲಿಕ್ಕೆ ಯತ್ನಿಸುತ್ತಿದ್ದಾರೆಂದು ಕೇಳುತ್ತೇವೆ.

ಇದು ಅಲ್ಲದೆ ಶ್ರೀಪಾದರಾಯರು—ಪ್ರಾಕೃತವನ್ನುಚ್ಚರಿಸಬಾರದು. ಪ್ರಾಕೃತಭಾಷೆಯಲ್ಲಿ ಗ್ರಂಥಗಳನ್ನು ಬರೆಯಬಾರದು, ಎಂಬೀ ವೈದಿಕರ ಹಟವಾದವನ್ನು ತೆಗೆದುಹಾಕಿ ಕೇವಲ ಭಾಷಾ ಪ್ರೇಮದಿಂದ ಕರ್ಣಾಟಕ ಭಾಷೆಯಲ್ಲಿ ಅನೇಕ ಕೀರ್ತನೆಗಳನ್ನೂ-ಸುಳಾದಿ-ಉಗಾಭೋಗಗಳನ್ನೂ ಬರೆದು ಕರ್ಣಾಕಸ್ಥರ ಮೇಲೆ ಮಹೋಪಕಾರವನ್ನು ಮಾಡಿರುವರು. ಇವರಿಗಿಂತಲೂ ೨೦೦-೩೦೦ ವರ್ಷಗಳ ಹಿಂದೆ ಇದ್ದ ಶ್ರೀನರಹರಿ ತೀರ್ಥರೇ ಮೊದಲಾದವರು ಕನ್ನಡ ಭಾಷೆಯಲ್ಲಿ ಕೀರ್ತನೆಗಳನ್ನು ರಚಿಸಿದ್ದರೂ ಅವು ಎಲ್ಲಿಯೋ ಒಂದೆರಡು ಮಾತ್ರ ಸಿಕ್ಕುತ್ತಿರುವದರಿಂದಲೂ, ನರಹರಿತೀರ್ಥ ರಿಂದ ಇವರ ಕಾಲದ ವರೆಗೆ ಅಂದರೆ ನಡುವಿನ ೨|೩ ಶತಮಾನಗಳಲ್ಲಿ ಯಾವ ದಾಸರು ಅಥವಾ ದಾಸಕೂಟದವರು ಆಗಿಹೋದರೆಂಬುದು ತಿಳಿದು ಬಂದಿಲ್ಲವಾದ್ದರಿಂದಲೂ ಇವರ ಕಾಲವನ್ನೇ ನಾವು ದಾಸಕೂಟದ ಅರುಣೋದಯ ಕಾಲವೆಂದು ಹೇಳಿರುವೆವು.

ಇನ್ನು ಇವರು ಬರೆದುದರಲ್ಲಿ ಭ್ರಮರಗೀತೆ-ಮಧ್ವನಾಮಗಳ ವಿಷ ಯವಾಗಿ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ.

ಗೋಪಗೀತ-ವೇಣುಗೀತ-ಭ್ರಮರಗೀತ ಎಂಬ ಮೂರು ಪ್ರಖ್ಯಾತ ಗೀತಗಳು ಸಂಸ್ಕೃತವಾಙ್ಮಯದಲ್ಲಿ ಶ್ರೀ ವೇದವ್ಯಾಸರಿಂದ ರಚಿಸಲ್ಪಟ್ಟ ಭಾಗವತಪುರಾಣವೆಂಬ ಮಹಾಗ್ರಂಥದಲ್ಲಿ ಉಕ್ತವಾಗಿವೆ. ಈ ಗೀತ ಗಳು—ಗೋಪಿಯರಿಗೆ ಶ್ರೀಕೃಷ್ಣನಲ್ಲಿರುವ ಅವ್ಯಾಜ ಪ್ರೀತಿಯನ್ನು—ಅಪಾರವಾದ ಭಗವದ್ಭಕ್ತಿಯನ್ನು ಸೂಚಿಸುತ್ತಿರುವವು. ಅಲ್ಲದೆ ಇವು ಹೆಚ್ಚೀ ಅಲಂಕಾರಿಕವಾಗಿಯೂ, ತಾಳ-ಲಯ ಬದ್ಧವಾಗಿಯೂ ಇದ್ದು, ದಿವ್ಯ ವಾದ ಛಂದಸ್ಸಿನಲ್ಲಿ ರಚಿಸಲ್ಪಟ್ಟಿರುವದರಿಂದ ಮತ್ತಿಷ್ಟು ಮನೋಹರ ವಾಗಿರುವವು. ಅಂತೆಯೇ ಮಹಾಭಗವದ್ಭಕ್ತರೂ, ಅಪರೋಕ್ಷ ಜ್ಞಾನಿ ಗಳೂ ಆದ ಶ್ರೀಪಾದರಾಯರು, ಪುರಂದರ ದಾಸರು, ಶ್ರೀ ವಾದಿರಾಜರು, ಪ್ರಸನ್ನವೇಂಕಟರು ಇವರೇ ಮೊದಲಾದವರು ಈ ಗೀತಗಳಲ್ಲಿ ಪರವಾದರ ವುಳ್ಳವರಾಗಿ ಆನಂದಾಶ್ರುಗಳನ್ನು ಸುರಿಸುತ್ತಾ, ತದೇಕಧ್ಯಾನಪರರಾಗಿ ದೀನಜನರ ಉದ್ಧಾರಕ್ಕೋಸ್ಕರ ಕರ್ಣಾಟಕಭಾಷೆಯಲ್ಲಿಯೂ ಇವು ಗಳನ್ನು ಹಾಡಿಕೊಂಡಿರುವರು.

ಭ್ರಮರಗೀತೆಯಲ್ಲಿ—ಗೋಪಿಯರು ಭ್ರಮರವನ್ನೇ ಮಥುರೆಯಿಂದ ಬಂದ ಕೃಷ್ಣನ ದೂತನೆಂಬ ವ್ಯಾಜದಿಂದ ಮಾತನಾಡಿಸಿ ಆತನೆದುರಿಗೆ ತಮ್ಮ ವಿರಹ ದುಃಖವನ್ನು ಹೇಳಿಕೊಂಡಂತಿರುವದು. ಇದು ಬಹಳ ರಸವತ್ತಾದುದು. ಭಕ್ತ್ಯುದ್ರೇಕವನ್ನು ಹುಟ್ಟಿಸುವಂತಹದು. ಇಂತಹ ಗೀತೆಯು ಪ್ರತಿಯೊಬ್ಬ ರಸಿಕವಾಚಕರ ಅವಗಾಹನಕ್ಕೂ ಬರಲೆಂದು ಇದಕ್ಕೆ ಮುನ್ನುಡಿಯಂತಿರುವ ಶೃಂಗಾರಪಾರಿಜಾತವನ್ನೂ-ಗೀತೆಯನ್ನೂ-ಕೆಳಗೆ ಕೊಡುತ್ತೇವೆ.

## ಶೃಂಗಾರ ಪಾರಿಜಾತ.

ಕಂಸನ ಆದೇಶದಿಂದ ಅಕ್ರೂರನು ಕೃಷ್ಣನನ್ನು ಮಥುರೆಗೆ ಕರೆದೊಯ್ಯಬೇಕೆಂದು ಬರಲು ಕೃಷ್ಣನು ಹೊರಡಲನುವಾದನು. ಈ ಸುದ್ದಿಯನ್ನು ಕೇಳಿ ಗೋಕುಲದೊಳಗಿನ ಗೋಪಿಕಾಸ್ತ್ರೀಯರೆಲ್ಲ ಕೃಷ್ಣಮೂರ್ತಿಯ ರಥವನ್ನು ಸುತ್ತುವರಿದು ನಿಂತು, ಮಥುರೆಗೆ ಹೋಗಬೇಡೆಂದು ಯಾವ ರೀತಿ ಹೇಳುತ್ತಾರೋ ಅದನ್ನೇ ಶೃಂಗಾರಪಾರಿಜಾತದಲ್ಲಿ ಬಣ್ಣಿಸಿದೆ.

ರಾಗ—ಮೋಹನ| ತಾಳ—ರೂಪಕ.

ಮಾನನಿಧಿ ಶ್ರೀಕೃಷ್ಣ ಮಥುರೆಘೋಗುವನಂತೆ ಏನು ಪಥವನ್ನು

ನಮಗ|| ಪಲ್ಲ || ಮಾನವೇನಿದಕೆ ಮಾನಿನಿಯರೆಲ್ಲರು ಕೂಡಿ| ಆಣೆಯನು ಕೊಟ್ಟವನ ಅಡ್ಡನಿಲಿಸುವ ಬನ್ನಿ || ಅ. ಪ. ||

ಕಳ್ಳತನವೆ ನಮಗಲ್ಲದವ ಸುಳ್ಳು ಎಲ್ಲವನು ಬಲ್ಲಿರಮ್ಮಾ|ಬಿಲದಲಿ ನಮ್ಮ ಬಿಟ್ಟದೇ ಹಿಳಿತು ವನಜಾಕ್ಷ|ಎಲ್ಲಿಗ್ಹದಿದರೆ ನಾವಲ್ಲಿಘೋಗುವ ಬನ್ನಿ || ೧ ||

ಇಂದು ದಯದಿ ಮೊದಲು ಇಂದೀವರಾಕ್ಷಿಯರು ಗೋ| ವಿಂದನಾಬಳಿಗ್ಹದುವಾ| ಹಿಂದು ಕಡೆಯಲಿ ಕುಳಿತು ಅರುಣಾಕ್ಷಿಯೋರ್ವಳೀ ಕೃಯಿಂದಲ್ಲಿಗೆ ಕರಪಿ ಕೇಳ್ವನು ಕೇಳ್ವನು || ೨ ||

ಹರಿಣಾಂಕ ವದನೆಯರು ನೆರೆದು ಬರುತಿಹರು ಕೇಳಿ | ಪರಮಹರುಷದಲಿ ಬಂದು|ಸರರಾತ್ರಿಯಲ್ಲಿ ಹೋಗಿ ಬರುವೆನೆಂದೆನಲಾಗಿ| ಎರಗಿ ಬಿನ್ನೈಸಿದರು ಅಂಬುಜದಳಾಕ್ಷನಿಗೆ || ೩ ||

|| ಶ್ಲೋಕ ||

ಹಲವು ಕಾಲವು ನಿನ್ನ ಸ್ನೇಹ ಸುಖವಾ ಹಾರೈಸಿಕೊಂಡಿರುತಿಹಾ |
ಲಲನಾವ್ಯೂಹವ ಬಿಟ್ಟಕ್ರೂರನೊಡನೆ ನೀ ಮಥುರೆಗೆ ಪೋದಡೆ |
ಕಲಿತಾಲಾಭವೆ ಕಾಂತ ಕೇಳು ದಿನವಾ ಆ ಕಂತುವಿನ ಬಾಧೆಗೆ |
ಘಳಿಗೊಂದು ಯುಗವಾಗಿ ತೋರುತಲಿದೆ ಜಲಜಾಕ್ಷ ನೀನಿಲ್ಲದೆ ||೧||

|| ಪದ ||

ಬ್ಯಾಡಮಥುರೆಗೆ ಪೋಗಬ್ಯಾಡೆಲವೊ ಶ್ರೀಕೃಷ್ಣ |
ಬೇಡಿಕೊಂಬೆವೊ ದೈನ್ಯದಿ | ನೋಡು ನಮ್ಮಾಲದಯ
ಮಾಡು ಮದನಂಗೆ ಗುರಿಮಾಡುವದು ಉಚಿತವೇನೆಲೊ
ಮಾಧವ ಕೃಪಾಕರನೆ || ೧ ||

|| ಶ್ಲೋಕ ||

ಬಾಲಭಾವದಲಿದ್ದಾಲಿಂಗಸುಖವ ಬಹುಬಗೆಯಲಿಂದುಳುಹಿದಾ |
ಲೋಲಲೋಚನೆ ನಿಮ್ಮ ಬಿಟ್ಟು ಪುರದಾಬಾಲೇರಿಗಾನೊಲಿದರೆ |
ನೀಲಕಂಠನು ನೆಚ್ಚ ನೋಡು ನಿಜವಾ ನಿಮಗ್ಯಾತಕೆ ಸಂಶಯ |
ಕಾಲಕ್ಷೇಪವನಲ್ಲಿ ಮಾಡೆ ಕಿಂಚಿತ್ಕಾಲದೊಳಾನ್ಬೆದುವೆ || ೨ ||

|| ಪದ. ||

ಪಾಲಿಸುವುದಪ್ಪಣೆಯ ಪಾಟಲಸುಗಂಧಿಯರೆ ಕಾಲಹರಣವಮಾಡದೆ |
ನಾಳೆ ಉದಯಕೆ ಪೋಗಿನಾಲ್ಕೆಂಟುದಿನದೊಳಾ | ವೇಳೆಗಿಲ್ಲಿಗೆ ಬರುವೆ
ಕಾಳಾಹಿವೇಣಿಯರೆ || ೨ ||

|| ಶ್ಲೋಕ ||

ಮಾರನಯ್ಯನೆ ಕೇಳು ಅಲ್ಲಿರುತಿಹ ನಾರೇರು ಬಲು ನಿಪುಣರೊ |
ನೀರಜಾಂಬಕ ಕೇಳು ನಿನ್ನ ಮನವಾ| ನಿಮಿಷಾರ್ಧದೊಳು ಸೆಳೆವರೊ||
ಮಾರಕೇಳಿಯ ಶಾಸ್ತ್ರಮರ್ಮವರಿತು ಆ ನಾರಿಯರು ನೆರೆಯಲು |
ಗಾರುಹಳ್ಳಿಯಲಿಪ್ಪ ಗೋವಳೆಯರಾ ವಿಚಾರಂಗಳ ಸ್ಮರಿಸಿಯಾ ||೩||

|| ಪದ ||

ಬಿಲ್ಲುಹಬ್ಬವೆ ಸುಳ್ಳು ಬಿಸರುಹಾಕ್ಷಿಯರಿಕ್ಷುಬಿಲ್ಲಿನುತ್ಸಹಕೆ ನಿಷ್ಟಿ |
ಖುಲ್ಲ ಅಕ್ರೂರನಾ ಕಳುಹಿಕರೆಸಿದರು ನೀವಲ್ಲಿ |
ವಲ್ಲಭೇರ ನೆರೆದು ನಮ್ಮೆಲ್ಲರಾ ಮರೆವಿಯಾ|| ೩ ||

|| ಶ್ಲೋಕ ||

ನಾರಿ ಹಾರ ಕಿರೀಟ ಕುಂಡಲಯುಗ ಕೇಯೂರಪರಿಯಾದಿಗಳು |
ಚಾರು ವಸ್ತ್ರ ಸುಗಂಧಪುಷ್ಪನಿಚ್ಚ ಹಾರಂಗಳ ಧರಿಸಿದೆ ||
ಮಾರಕೇಳಿಯ ಮಾತಿಲಿಂದಲವರಾಮನಸೆಮ್ಮಲೊಂದಾಗದೆ |
ನಾರೇರೊಲುಮೆಯುಂಟೆ ಲೋಕದೊಳಗೆ ಇನ್ನ್ಯಾತಕೆ ದೂರ್ವಿಗರಿ || ೪ ||

|| ಪದ ||

ಮಲ್ಲಯುದ್ಧವ ಕೊಡಬೇಕೆನುತ ಮಾವನಮ್ಮಲ್ಲಿಗೆ ಕರೆಸಲದಕೆ |
ಇಲ್ಲದಪವಾದ ಈ ಸುಳ್ಳುಸುದ್ದಿಗಳು ನೀವೆಲ್ಲ ಸೃಜಿಸಿದರೆ ಸರಿಯಲ್ಲ
ನಿಮಗಿಳೆಯೊಳಗೆ || ೪ ||

|| ಶ್ಲೋಕ ||

ಪತಿ ಸುತ ಪಿತರು ಮುಖ್ಯಾ ಭ್ರಾತೃ ಬಾಂಧವರು ಎಂಬಾ |
ಅತಿಶಯ ನಮಗಿಲ್ಲಾ ಲಾಲಿಸೀಮಾತನೆಲ್ಲ ||
ರತಿ ಪತಿ ಪಿತ ನೀನು ರಾತ್ರಿಯೊಳು ಕೊಳಲನೂದೆ |
ಕ್ಷಿತಿ ಪತಿ ನಿನ್ನಡಿಗೆ ಕ್ಷಿಪ್ರದಿಂ ಬಂದೆವೆಂದು || ೫ ||

|| ಪದ ||

ಬಾಲತನದಲಿ ರವಿಜೆತೀರದಲಿ ನೀ ವತ್ಸಪಾಲನೆಯ ಮಾಡುತಿಪ್ಪಾ| ಕಾಲ ಮೊದಲಾಗಿ ಈ ವೇಳೆಪರಿಯಂತರವು ಅಲಯುವಗೆಲಿರುವ ಕಾಂತೆಯರ ತ್ಯಜಿಸಿನ್ನು || ೫ ||

|| ಶ್ಲೋಕ ||

ನೀಲಕುಂತಳೆ ಕೇಳು ನಿಮ್ಮ ಮನೆಯಾ ಅನೆಲುವಿನ ಮೇಲಿನ |
ಪಾಲು ಬೆಂಣೆಯು ಕದ್ದು ಮೆದ್ದು ಬಹಳಾಕಾಲಂಗಳ ಕಳೆದೆನೆ ||
ಬಾಲೆ ಮನ್ಮಥಬಾಣವೆತ್ತು ತವನೆ ಬಲುಬಗೆಯಲಿಂದುಳುಹಿದಾ |
ಲೋಲಲೋಚನೆ ನಿಮ್ಮೊಳಾನುಬಹಳಾ ಜಾಲಂಗಳಂಮಾಳ್ಪೆನೆ || ೬ ||

|| ಪದ ||

ಬಟ್ಟಕಂಗಳೆ ನಿಮ್ಮ ಬಿಟ್ಟು ಘಳಿಗಿರಲಾರೆ ದುಷ್ಟ ಕಂಸನು ಕರೆಸಲ ದಳೆ| ಅಟ್ಟ ಪೋಗದಲಿರೆ ಶಿಟ್ಟನಿಂದಲಿ ವ್ರಜಕೆ| ಅಟ್ಟುಳೆಯು ಮಾಡು ವನು ಅಂಬುಜಸುಕಂಠಿಯರೆ || ೬ ||

|| ಶ್ಲೋಕ ||

ವಾರಿಜೋದ್ಭವನಯ್ಯಾ ನಿನ್ನ ವಿರಹ ವಾರಾಸಿಯೋಳ್ ಮುಣಗಿಹ|
ವಾರಿವಾಹನಿಭಾಂಗ ವಾಸವನುತ ವಾಕೆಮ್ಮದೊಂದಾಲಿಸೋ ||
ವಾರಿಜಾಂಬಕ ವಾರಿಜಾರಿವದನಾ ವಾರಾಸಿಜಾ ವಲ್ಲಭಾ |
ನಾರಿ ನಿಚಯ ಪಾರಗುಣಿಸೊ ಕೃಪಾನಾವಿಯಲಿಂದೆಮ್ಮನು || ೭ ||

|| ಪದ ||

ಮಾರನೆಂಬವ ಬಲುಕ್ರೂರನಮ್ಮಗಲಿ ನೀ ಊರಿಗೆ ಪೋದುದನು ಕೇಳಿ | ವಾರಿಜಾಸ್ತ್ರವನೆ ಎದೆಗೇರಿಸೆಮ್ಮನು ಬಿಡದೆ | ಹೋರುವನ ಹೋರಾತ್ರಿಯಲಿ ಚರಿಸುತಾ || ೭ ||

|| ಶ್ಲೋಕ ||

ಪರಿಪರಿಯಲಿ ನಿಮ್ಮಪಾಡನೆ ಕೇಳಿ ಮುನ್ನಾ | ಕರುಣವು ನಿಮಗಿಲ್ಲಾ ಕಾಂತೆ ಕೇಳೆಮ್ಮ ಸೊಲ್ಲಾ | ತ್ವರಿತದಿ ಬರದಿಲ್ಲೆ ತಡದು ನಾನಿರಲು ಅಲ್ಲೆ | ಸರಸಿಜ ಭವಮಾರನಾಣೆ ಕೇಳೆ ಪ್ರವೀಣೆ || ೮ ||

|| ಪದ ||

ಹರಿಣಾಂಕವದನೆಯರುಹರುಷಪೂರಿತರಾಗಿ | ಕರೆದು ತಾಂಬೂಲವಿತ್ತು
ಕಳುಹಿರೆನ್ನನು ನಿಮ್ಮ ಋತುಕಾಲಕೆ ಬಂದು ನೆರೆಯದಿದ್ದರೆ ನಾನು
ಪರಮ ಪುರುಷನೆ ಕೇಳೆ || ೮ ||

|| ಶ್ಲೋಕ ||

ಮಾರನೆಂಬುವ ಮಡಿದು ಪೋದಶಿವನಾ ಆ ಮೂರನೇ ಕಣ್ಣಿನಿಂದಾ |

ನಾರೇರಿಲ್ಲದೆ ನಾಭಿಯಿಂದ ಪಡೆದಾ ತಾ ಬ್ರಹ್ಮನೆಂಬಾತ ನಾ ||
ನಾರಿಯೀರ್ವರ ಕುಮಾರರಾಣೆ ಹರಿಯು ಸೇರಿ ನಿಲ್ವುದು ಎಂತೆನೆ |
ಮಾರಿಹೊರಗಿನ ಹೊರಗೆ ಹೋಯಿತೆಂಬನ ತಿರಿಗಿರೆ ಭಾಮಿನಿ || ೯ ||

|| ಪದ ||

ಹಲವು ಮಾತುಗಳ್ಯಾಕೆ ಜಲಜಾಕ್ಷಿ ನಿಮ್ಮ ಪದನಳಿನವನು ನೆರೆನಂಬಿಹ|
ಬಲುಮೆಯಿಂದಿರುತಿಪ್ಪ ಲಲನಾವ್ಯೂಹವ ಬಿಟ್ಟು ಸಲಹೊ ಬಾ
ಹೆಮ್ಮನು ರಂಗ ವಿಠ್ಠಲರೇಯ || ೯ ||

---

ಭ್ರಮರ ಗೀತೆ.

ರಾಗ--ಮುಖಾರಿ—ಅಟತಾಳ.

ಭೃಂಗಾನಿನ್ನಟ್ಟದನೆ ಶ್ರೀರಂಗ ಮಥುರೆಲಿನಿಂತು | ಅಂಗಜಲುಬ್ಧಕ ಪ್ರೊಂ
ಗೊಳಲ ತಡೆಯನಿಕ್ಕಿ | ಅಂಗನೇರೆಂಬ ಹುಲ್ಲೆ ಮೃಗಂಗಳಿಗೆ ಗುರಿ ಹಚ್ಚಿ |
ಹಿಂಗಿಸುತ್ತೈದಾನೆ ಅಸುವಾ ಹೇ ಕಿತವಾ || ಪಲ್ಲ ||
ನಿನ್ನ ನೋಡೆ ನಮ್ಮ ಅಚ್ಯುತನ್ನ ಕಂಡಂತಾಯಿತಯ್ಯೋ | ಚನ್ನಿಗರರಸು
ಕುಶಲೋನ್ನತಿಯೊಳಿಹನೇನೊ | ಚಿನ್ನತನ ಮೊದಲಾಗೆವನಕಿತವಬಲ್ಲೆವೊ|
ಗನ್ನಗಾರಾ ಚಿತ್ತಚೋರನ್ನ ಶ್ರೀಹರಿಯು | ಮನ್ನಣೆಗೆ ಮೆಚ್ಚಿತನುವನ್ನೊ
ಪ್ಪಿಸಿದ ಮುಗುಧ | ಹೆಣ್ಣುಗಳ ವಿರಹಾಬ್ಧಿಯನ್ನೆ | ದಾಟಿಸುವೆನೆಂದು |
ತನ್ನಸ್ನೇಹವೆಂಬ ನಾವಿಯನ್ನೇರಿಸಿ ಮೋಸದಿ ನಡುನೀರೊಳು ತೊರ
ಧೋಗತಾನೆಯೋ ಕಿತವಾ || ೧ ||
ತಮ್ಮ ನಂದಗೋಪಸುತೋದೆಮ್ಮನೆ ಕಂಡು ಬಾರೆಂದು | ರಮ್ಮೆಯಾ
ರಮಣನಿನ್ನಾ ಹಮ್ಮಿ ಕಳುಹಿದನ್ಯೆಸೆ ಹಮ್ಮುಗೆಟ್ಟು | ರಮ್ಯಾಣೆರೆಂದು
ಮ್ಮಳಿಸಿದೆವೊ ವೃಥಾ | ನಮ್ಮ ಹಂಬಲಿನ್ನೇನವಗೆ ಶ್ರೀಹರಿಗೆ | ಹೊಮ್ಮೇ
ಲಟ್ಟದಲಂಚೆಯಾಗಮ್ಮನೆರಡು ಕುಚದ ಕುಂಕುಮ ಕಸ್ತೂರಿಯಕರ |
ದಿಮ್ಮದಿ ಶಿಲುಕಿದಂಗೆ ಕಮ್ಮಗೋಲನ ಬಾಣಂಗಳುಮ್ಮಳಿಸಿ ಈಸುತಿದೆ
ಸುಮ್ಮನೆ ಬಾ ಹೋದೆ ಸುಲಭ ಯೋ ಕಿತವಾ || ೨ ||
ಮಧುಕುಂಜವನದಲ್ಲಿ ಮಧುವೈರಿ ಕೊಳಲೂದಲು | ಮಧುರ ಸುಸ್ವರ
ಕೇಳಿ ಮದಿರಾಕ್ಷೆಯರೆಲ್ಲರು ಧಾಮದ ಧ್ಯಾನಬಿಟ್ಟು ಮೃಗಮದಗಂಪ

ಪಿಡಿದ್ಯೆದಿ ಮದನನಯ್ಯನ ಕಾಣುತ ಶ್ರೀಹರಿಯು | ಮುದವೇರಿ ತಲೆವಾಗಿ ಮೇದಿನಿ ನಿಟ್ಟಿಸಲಾಗ | ಮೃದುವಾಕ್ಯದೊಳಿಮ್ಮಪ್ಪಿ | ಅಧರಾಮೃತಭೋಜನಕೊಡಗು | ವಾಸತತ ಸನ್ನದ ನಮ್ಮನಗಲಿ ಕಲ್ಲಿದೆಯಾದನೆಂತೊ ಕೃಪಾಳು || ೩ ||

ವಜ್ರಾಂಕುಶ ಧ್ವಜಾಂಕಿತ ಹೆಜ್ಜೆಯನ್ನೆ ತಿಳಿದ ಆ | ಅಬ್ಜಾಕ್ಷಿಯರೊಡನೆ ರತಿಕಜ್ಜದುಪವನದಲ್ಲಿ | ನಿರ್ಜರೋತ್ತಂಸರೊಡನೆ ಮಜ್ಜನಕ್ರೀಡ್ಯಾಡುವ ಸಾ | ಯುಜ್ಯ ಸುಖ ಎತ್ತಲಿಪ್ಪದೊ ಶ್ರೀಹರಿ | ಅಬ್ಜಭವ ಮುನಿಜನ ಪೂಜ್ಯನಗಲಿದ ಮೇಲೆ | ನಿರ್ಜೀವಿಗಳಾಗಿ ಕಣ್ಣ ಕಜ್ಜಲ ಕಲಕಿಕೊಂಡು| ಲಜ್ಜೆಗೆಟ್ಟು ತನುವತಿ ಜಜ್ಜರಿತದಿ ಜೀವಿಸೆ| ವಜ್ರದೆದೆಯಲ್ಲವೆ ನಮ್ಮದು ಹೇ ಕಿತವಾ || ४ ||

ಕತ್ತಲೆ ವೈರಿಯು ಬಿಟ್ಟು ಮುತ್ತಿನ ಜೊಲ್ಲಿದುರುಬಿಲಿ | ಕಸ್ತೂರಿ ತಿಲಕವು ವಾಲಿ ತಾ ಕುಂಡಲ ಬೆಳಗುತಿರೆ| ವೃತ್ತವಾರನಾರಿ ಮಂದಸ್ಮಿತತಿಂಗಳಿಂದ ಎಮ್ಮಯ | ಹೃತ್ತಾಪವ ಪರಿಹರಿಸುವ ಶ್ರೀಹರಿಯಾ | ಮತ್ತೆವಕ್ಷದ ಶ್ರೀ ವತ್ಸ ಕೌಸ್ತುಭ ವೈಜಯಂತಿ ಮಾಲೆ ಶ್ರೀ ತುಳಸಿ ಘಮಘಮಿಸುತ್ತಲಿಹ ವನಮಾಲೆಯು ರತುನಕಂಕಣ ಭುಜಕೀರ್ತಿಯಿಂದೊಪ್ಪುವಾ ಪುರುಷೋತ್ತಮನ್ನ ಬಣ್ಣಿಪರುಂಟೆ ಹೇ ಕಿತವಾ || ೫ ||

ಉತ್ಪಲಶ್ಯಾಮಲವೇದವೆತ್ತ ಭಾವಚನ್ನದಿಂದ | ಅತ್ಯಮಲಾಪೊನ್ನಂಬರ ಸುತ್ತಿದಡಾ ಮತ್ತ ನೂಪುರ ಝಣತ್ಕಾರದಿ ಮಿಂಚುವ ಚಿತ್ರಶಿಖಿಗೆ ಪೀಯೂಷ| ಸುತ್ತಮೇಘನಂತೆ ಒಪ್ಪುವಾ ಶ್ರೀಹರಿಯು | ಹೆತ್ತತಾಯಿ-ಆಪ್ತ-ಬಂಧು-ಗೋತ್ರ ಗತಿ ನೀನೇ ನಮ್ಮ | ಚಿತ್ತವೆಂದು ನಂಬಿ ತನ್ನ ಹತ್ತಲಿ ಸಾರಿದವರ ವತ್ತಿ ತಾ ರಥವನೇರಿ| ಸತ್ವರಾ ಬರುವೆನೆಂದು ಮತ್ತ ಕ್ರೂರನೊಡನೈದಿದಾ ಹೇ ಕಿತವಾ || ೬ ||

ಲಕ್ಷ್ಮಿರಮಣನ ಸೂಕ್ಷ್ಮದಗೊಲ್ಲತೆರು ನಾವು| ಕುಕ್ಷಿಯೊಳುಬೊಮ್ಮಾಂಡವವಗೆ ಮಕ್ಷಿಕಗಳಂತಿಪ್ಪೆವೊ | ಮೋಕ್ಷಿಗಳ ರಸನವ ಗೋಕ್ಷೀರದಿ ತಪ್ತರಾವು ರಕ್ಷಿಸುವನೆಂತೊ ನಮ್ಮನು ಶ್ರೀಹರಿಯು| ರಕ್ಷಿಸಲು ದಿಶಿಜನ ರಕ್ಷಣೆಗೆ ಪಾಲ್ಬೆಣ್ಣೆಯಾ| ಭಕ್ಷಿಸಿ ನಿರುತಾ ನಮ್ಮ ಅಕ್ಷಿಗೆ ಹಬ್ಬವನುಣಿಸಿ ಈ ಕ್ಷೋಣಿ ಭಾರ ಹಾರ್ಯವು ಶಿಕ್ಷೆಗೆ ಕರ ಂಸಾಮ್ಯ ವಕ್ಷ ಮಾಣರಾದೆ ಮೂರ್ಖರೋ ಹೇ ಕಿತವಾ ||೭||

ಹಿಂದೆಮಾಡಿದ ಸದ್ಧರ್ಮದಿಂದಮಧುನಗರದ | ಇಂದೀವರಾಕ್ಷೇರಾನಂದ ಸಿಂಧುಉದಿಸಿದಪೂರ್ಣ | ಚಂದ್ರನಂತೊಪ್ಪುವಸಿರಿಮಂದರಧರನಂಘ್ರಿಯಾ| ಪೊಂದುವಾಭಾಗ್ಯಕ್ಕೆಣೆಯುಂಟೆ ಶ್ರೀಹರಿಯಾ | ಅಂದೆಮ್ಮೊಳು ರಾಸಕ್ರೀಡೆ ಯಿಂದ ಬಂದ ಪರಾಭವ | ವಂದನೆಣಿಸದೆ ಸಲಹೆಂದು ಬಿನ್ನೈಸಿ ಸಾಷ್ಟಾಂಗ ದಿಂದ ವಂದಿಸೆವು ಭಕ್ತ | ಬಂಧುವಿಗೆ ಎಮ್ಮ ಹೃದಯ ಮಂದಿರದೊಳಿಂ ದೆಂದಿರೆಂದು | ಹೇ ಕಿತವಾ || ೮ ||

ಹೆಂಗಳಿರೊಂದಾಗಿ ಅಂತರಂಗದರಸನಾಡಿದ | ಮಂಗಳ ಚರಿತ್ರೆಯನ್ನು ಸಂಗೀತದಿಂ ಪೊಗಳುತ್ತ ಕಂಗಳು ಶೃಂಗಾಳುವುತ್ತ ಇಂಗಿತಜ್ಞದೇವಾ ನಂಗಸಂಗದಾನಂದವಾನೆನೆದು ಶ್ರೀಹರಿಯು | ಮಂಗಳ ವೇದಸ್ತ್ರೀಯು ನಾರಿ ಶೃಂಗಾರಕರೂರುಮಾ ನಮ್ಮ ಪೊಂಗಣ್ಣನ ಶೀಘ್ರನರ | ಸಿಂಗವಟುಭಾರ್ಗ ವನೆ ಅಂಗದಾಪಾರ್ಥಪಶಂಭು ತುರಂಗಾದ ರಂಗವಿಠ್ಠಲ ತುಂಗಮಹಿಮಾ ನವೇ ಎಂಬೆ ಏ ಕಿತವಾ || ೯ ||

---

|| ಮಧ್ವನಾಮ ||

ಇದು ದ್ವೈತಮತಸ್ಥಾಪಕರಾದ ಶ್ರೀಮನ್ಮಧ್ವಾಚಾರ್ಯರ ಸ್ತೋತ್ರ ವೆಂಬುದು ಹೆಸರಿನ ಮೇಲಿಂದಲೇ ಗೊತ್ತಾಗುವದು; ಆದರೂ ಇದರಲ್ಲಿ ಮೂಲ ಮುಖ್ಯ ವಾಯುಪರವಾಗಿ ೪ ಪದ್ಯಗಳೂ, ಆ ವಾಯುದೇವರ ಮೊದಲನೇ ಅವತಾರವಾದ ಶ್ರೀ ಹನುಮಂತದೇವರ ಪರವಾಗಿ ೭ ಪದ್ಯ ಗಳೂ, ಎರಡನೇ ಅವತಾರವಾದ ಭೀಮಸೇನ ದೇವರ ಪರವಾಗಿ ೧೦ ಪದ್ಯ ಗಳೂ, ಶ್ರೀಮಧ್ವಾಚಾರ್ಯರ ಪರವಾಗಿ ೭ ಪದ್ಯಗಳೂ (ಅಂತೂ ೨೭ ಪದ್ಯಗಳು) ಇವೆ. ಕಡೆಯಲ್ಲಿ ದಾಸಕೂಟ ಪ್ರಮುಖರೂ, ಅಪರೋಕ್ಷ ಜ್ಞಾನಿಗಳೂ ಆದ ಶ್ರೀ ಜಗನ್ನಾಥದಾಸರಾಯರು ೩ ಪದ್ಯಗಳಿಂದ ಇದಕ್ಕೆ ಬಹು ಮನೋಹರವಾದ ಫಲಶ್ರುತಿಯನ್ನು ಹೇಳಿರುವರು. ಇದು ಸೌರಾಷ್ಟ್ರರಾಗದಲ್ಲಿ ರಚಿತವಾಗಿದೆ.

|| ಶ್ರೀ ಗುರುಭ್ಯೋನಮಃ ||

|| ಹರಿಃ ಓಂ ||

ರಾಗ—ಸೌರಾಷ್ಟ್ರ

ಜಯ ಜಯ ಜಗತ್ರಾಣ | ಜಗದೊಳಗೆ ಸುತ್ರಾಣ | ಅಖಿಳಗುಣಸದ್ಧಾಮ| ಮಧ್ವನಾಮಾ || ಪಲ್ಲ ||

(ಮೂಲ ಮುಖ್ಯ ವಾಯುಸ್ತೋತ್ರಂ)

ಆವ ಕಚ್ಛಪರೂಪದಿಂದಲಂಡೋದಕವನೋವಿ ಧರಿಸಿದ ಶೇಷ ಮೂರುತಿಯನು ‖ ಆವವನ ಒಳಿವಿಡಿದು ಹರಿಯು ಸುರರ್ಪೈದುವರು ಆ ವಾಯು ನಮ್ಮ ಕುಲಗುರುರಾಯರು ‖ ೧ ‖

ಆವವನು ದೇಹದಲಿ ಇರಲು ಹರಿ ನೆಲಸಿಹನು ಆವವನು ತೊಲಗೆ ಹರಿತಾ ತೊಲಗುವ ‖ ಆವವನು ದೇಹದೊಳಹೊರನಿಯಾಮಕನು ಆ ವಾಯು ನಮ್ಮ ಕುಲಗುರುರಾಯರು ‖ ೨ ‖

ಕರ್ಣಾಭಿಮಾನಿಗಳು ಸುರರು ದೇಹವ ಬಿಡಲು ಕುರುಡ ಕಿವುಡನು ಮೂಕನೆಂದೆನಿಸುವ ‖ ಪರಮ ಮುಖ್ಯಪ್ರಾಣ ತೊಲಗಲಾ ದೇಹವನು ಅರಿತು ಪೆಣನೆಂದು ಪೇಳ್ವರು ಬುಧಜನ ‖ ೩ ‖

ಸುರರೊಳಗೆ ನರರೊಳಗೆ ಸರ್ವಭೂತಗಳೊಳಗೆ ಪರತರನೆನಿಸಿ ನಿಯಾಮಿಸಿ ನೆಲಸಿಹ ‖ ಹರಿಯುನಲ್ಲದೆ ಬಗೆಯ ಅನ್ಯರನು ಲೋಕದೊಳು ಗುರುಕುಲ ತಿಲಕ ಮುಖ್ಯ ಪವಮಾನನು ‖ ಜಯ ಜಯ ‖ ೪ ‖

‖ ಪ್ರಥಮಾವತಾರ—ಶ್ರೀಹನುಮಂತ ಸ್ತೋತ್ರಂ ‖

ತ್ರೇತೆಯಲಿರಘುಪತಿಯ ಸೇವೆಮಾಡುವೆನೆಂದು ವಾತಸುತ ಹನುಮಂತನೆಂದೆನಿಸಿದ ‖ ಪೋತಭಾವದಿ ತರಣಿ ಬಿಂಬಕ್ಕೆ ಲಂಘಿಸಿದ ನೀತಗೆಣೆಗಾಣೆ ಮೂಲೋಕದೊಳಗೆ ‖ ೫ ‖

ತರಣಿಗಭಿಮುಖನಾಗಿ ಶಬ್ದಶಾಸ್ತ್ರವ ಪಠಿಸಿ ಉರವಣಿಸಿ ಹಿಂದುಮುಂದಾಗಿ ನಡೆದ ‖ ಪರಮ ಪವಮಾನಸುತನುದಯಾಸ್ತ ಶೈಲಗಳಭರದಿಯ್ದಿದ ನೀತಗುಪಮೆಯುಂಟೇ ‖ ೬ ‖

ಅಖಿಳವೇದಗಳ ಸಾರವ ಧರಿಸಿ ಮುನ್ನಿವನು ನಿಖಿಲ ವ್ಯಾಕರಣಗಳ ನಿವಹ ಪೇಳ್ದಾ ‖ ಮುಖದಲ್ಲಿ ಕಿಂಚಿದಪ ಶಬ್ದ ಇವಗಿಲ್ಲೆಂದು ಮುಖ್ಯಪ್ರಾಣನನು ರಾಮನನುಕರಸಿದ ‖ ೭ ‖

ತರಣಿಸುತನನುಕಾಯ್ದು ಶರಧಿಯನೆನೆರೆದಾಂಟಿ ಧರಣಿಸುತೆಯಳ ಕಂಡು ದನುಜರೊಡನೆ ‖ ಭರದಿ ರಣವನುಮಾಡಿ ಗೆಲಿದು ದಿವ್ಯಾಸ್ತ್ರಗಳ ವುರುಹಿ ಲಂಕೆಯ ಬಂದ ಹನುಮಂತನು ‖ ೮ ‖

ಹರಿಗೆ ಚೂಡಾಮಣಿಯನಿತ್ತು ಹರಿಗಳಕೂಡಿ ಶರಧಿಯನು ಕಟ್ಟಿ ಬಲು ರಕ್ಕಸರನಾ || ವರಸಿರಣದಲ್ಲಿ ದಶಶಿರನ ಹುಡಿಗುಟ್ಟಿ ತಾಮೆರೆದ ಹನುಮಂತ ಬಲವಂತ ಧೀರಾ || ೯ ||

ಉರಗ ಬಂಧಕೆ ಶಿಲುಕಿ ಕಪಿವರರು ಮೈಮರೆಯೆ ತರಣಿ ಕುಲತಿಲಕ ನಾಜ್ಞೆಯ ತಾಳಿದ || ಗಿರಿಸಹಿತ ಸಂಜೀವನವ ಕಿತ್ತು ತಂದಿತ್ತ ಹರಿವರಗೆ ಸರಿಯುಂಟೆ ಹನುಮಂತಗೆ || ೧೦ ||

ವಿಜಯ ರಘುಪತಿ ಮೆಚ್ಚಿ ವರವ ಬೇಡೆಂದೆನಲು ಭಜಿಸಿ ಮೌಕ್ತಿಕಹಾರ ವನೆ ಪಡೆದ || ಅಜಪದವಿಯನು ರಾಮ ಕೊಡುವೆನೆನೆ ಹನುಮಂತ ನಿಜ ಭಕುತಿಯನೆ ಬೇಡಿ ವರವ ಪಡೆದಾ || ೧೧ ||

||ದ್ವಿತೀಯಾವತಾರ—ಶ್ರೀ ಭೀಮಸೇನ ಸ್ತೋತ್ರಂ||

ಆ ಮಾರುತನೆ ಭೀಮನೆನಿಸಿ ದ್ವಾಪರದಲ್ಲಿ ಸೋಮಕುಲದಲಿ ಜನಿಸಿ ಪಾರ್ಥರೊಡನೆ || ಭೀಮ ವಿಕ್ರಮರಾದ ರಕ್ಕಸರ ಮುರಿದೊಟ್ಟಿದಾ ಮಹಿಮ ನಮ್ಮ ಕುಲುಗುರುರಾಯರು ||೧೨||

ಕರದಿಂದ ಶಿಶುಭಾವನಾದ ಭೀಮನ ಬಿಡಲು ಗಿರಿಯೊಡೆದು ಶತಶೃಂಗ ವೆಂದೆನಿಸಿತು || ಹರಿಗಳಾಹರಿಗಳಿಂ ಕರಿಗಳಾಕರಿಗಳಿಂತರಿವ ವೀರನಿಗೆ ಸುರ-ನರರು ಸರಿಯೆ || ೧೩ ||

ಕುರುಪಗರಳವನಿಕ್ಕೆ ನೆರೆಯುಂಡು ತೇಗಿದಾ ಉರಗಗಳ ಮ್ಯಾಲ್ ಬಿಡಲು ಅವನೊರಿಸಿದ || ಅರಗಿನಾ ಮನೆಯಲ್ಲಿ ಉರಿಯನಿಕ್ಕಲು ವೀರ ಧರಿಸಿ ಜಾಹ್ನವಿಗೊಯ್ದ ತನ್ನನುಜರ ||೧೪||

ಅಲ್ಲಿದ್ದ ಬಕಹಿಡಂಬಕರೆಂಬ ರಕ್ಕಸರ ನಿಲ್ಲದೊರಸಿದ ಲೋಕಕಂಟಕರನಾ|| ಬಲ್ಲಿದ ಸುರರಗೆಲಿದು ಭಾರತಿಯ ಕೈವಿಡಿದು ಎಲ್ಲ ಸುಜನರಿಗೆ ಹರುಷವ ತೋರಿದಾ || ೧೫ ||

ರಾಜಕುಲಗಿರಿ ವಜ್ರನಾಗೆಧನ ಮುರಿದೊತ್ತಿ ರಾಜಸೂಯಾಗವನು ಮಾಡಿಸಿದನು || ಆಜಿಯೊಳು ಕೌರವರ ಬಲವ ಸವರುವೆನೆಂದು ಮೂರ್ಜಗೆ ವರಿಯೆ ಕಂಕಣ ಕಟ್ಟಿದಾ||೧೬||

ಮಾನನಿಧಿ ದ್ರೌಪದಿಯ ಮನದಿಂಗಿತವನರಿತು ದಾನವರ ಕುಲ ಸವರ ಬೇಕೆಂದು ಬೇಗ|| ಕಾನನವ ಪೊಕ್ಕು ಕಿಮ್ಮೀರನ್ನ ಮುರಿದೊತ್ತಿ ಮಾನಿನಿಗೆ ಸೌಗಂಧಿಕವತಂದ ||೧೭||

ದುರುಳ ಕೀಚಕನು ತಾ ದ್ರೌಪದಿಯ ಚಲ್ವಿಕೆಗೆ ಮರುಳಾಗಿ ಕರಕರೆಯ ಮಾಡಲವನಾ|| ಗರುಡಿಮನೆಯಲಿ ಬರಿಸಿ ಸವರಿ ಯವನನ್ವಯವ ಕುರುಕ ನಟ್ಟಿದ ಮಲ್ಲಕುಲವ ಸದೆದ ||೧೮||

ವೈರಿದುಃಶಾಸನನ ರಣದೊಳಗೆ ಅಡಗೆಡಹಿ ವೀರ ನರಹರಿಯ ಲೀಲೆಯ ತೋರಿದಾ|| ಕೌರವನ ಬಲ ಸವರಿ ವೈರಿಗಳ ನೆಗ್ಗೊತ್ತಿವೋರಂತೆ ಕೌ ವರ ಮುರಿದು ಮೆರೆದಾ||೧೯||

ಗುರುಸುತನ ಸಂಗರದಿ ನಾರಾಯಣಾಸ್ತ್ರವೊಂದುರವಣಿಸಿಬರಲು ಶಸ್ತ್ರವ ಬಿಸುಟರು || ಹರಿಕೃಪೆಯ ಪಡೆದಿರ್ದಭೀಮ ಹುಂಕಾರದಲಿಹರಿಯದಿವ್ಯಾ ಸ್ತ್ರವನು ನೆರೆಯಟ್ಟಿದಾ || ೨೦ ||

ಚಂಡವಿಕ್ರಮನು ಗದೆಗೊಂಡು ರಣದಲ್ಲಿ ಭೂಮಂಡಲದೊಳಿದಿರಾಂತಖ ರನೆಲ್ಲಾ || ಹಿಂಡಿಬಿಸುಟಿಹ ವೃಕೋದರನ ಪ್ರತಾಪವನು ಕಂಡು ನಿಲ್ಲುವ ರಾರು ತ್ರಿಭುವನದೊಳು || ೨೧ ||

---

|| ತೃತೀಯಾವತಾರ——ಶ್ರೀಮನ್ಮಧ್ವಸ್ತೋತ್ರಂ ||

ದಾನವರು ಕಲಿಯುಗದೊಳವತರಿಸಿ ವಿಬುಧರೊಳುವೇನು (ಹೀನ) ಮ ವನ್ನರುಹಲದನು ಅರಿತು || ಜ್ಞಾನಿ ತಾ ಪವಮಾನ ಭೂತಳದೊಳವತರಿ ಮಾನನಿಧಿ ಮಧ್ವಾಖ್ಯನೆಂದೆನಿಸಿದಾ || ೨೨ ||

ಅರ್ಭಕನಾಗಿ ಕಾನನವೆಯ್ದಿ ಬದರಿಯಲಿ ಮಧ್ವಮುನಿ ನಿರ್ಭಯದಿ ಸಕ ಶಾಸ್ತ್ರವ ಪಠಿಸಿದಾ || ಉರ್ವಿಯೊಳು ಮಾಯೆ ಬೀರಲು ತತ್ವಮಾರ್ಗವನ ಸರ್ವ ಸುಜನರಿಗೆ ತೋರಿ ಮೆರೆದಾ || ೨೩ ||

ಸರ್ವೇಶ ಹರಿ ವಿಶ್ವವೆಲ್ಲ ಪುಸಿಯೆಂದೆಂಬ ದುರ್ವಾದಿಗಳ ಮತವನೆರೆ ಖ ಡ್ರಿಸಿ || ಸರ್ವೇಶ ಹರಿ ವಿಶ್ವ ಸತ್ಯವೆಂದರುಹಿದಾ ಶರ್ವಾದಿ ಗೀರ್ವಾ ಸಂತತಿಯಲಿ || ೨೪ ||

ಬದರಿಕಾಶ್ರಮಕೆ ಪುನರಪಿಯೈದಿ ವ್ಯಾಸಮುನಿ ಪದಕೆರಗಿ ನಿಖಿಳ ವೇ ರ್ಥಗಳನು || ಪದುಮನಾಭನ ಮುಖದಿ ತಿಳಿದು ಬ್ರಹ್ಮತ್ವವೈದಿದ ಮಧ ಮುನಿರಾಯಗಭಿವಂದಿಪೆ || ೨೫ ||

ಜಯಜಯತು ದುರ್ವಾದಿ ಮತತಿಮಿರ ಮಾರ್ತಾಂಡ ಜಯಜಯತುವಾ ಗಜಪಂಚಾನನಾ || ಜಯಜಯತು ಚಾರ್ವಾಕ ಗರ್ವ ಪರ್ವತ ಕುಲಿ ಜಯಜಯ ಜಗನ್ನಾಥ ಮುನಿಮಧ್ವನಾಥ || ೨೬ ||

ತುಂಗಕುಲಗುರುವರನ ಹೃತ್ಕಮಲದೊಳು ನಿಲಿಸಿ ಭಂಗವಿಲ್ಲದ ಸುಖವ ಸುಜನರಿಂಗೆ || ಹಿಂಗದೆ ಕೊಡುವ ನಮ್ಮ ಮಧ್ವಾಂತರಾತ್ಮಕ ಶ್ರೀರಂಗ ವಿಠಲನೆಂದು ನೆರೆಸಾರಿರ್ಪೆಯ್ಯಾ || ೨೭ ||

|| ಶ್ರೀಜಗನ್ನಾಥ ದಾಸರು ಹೇಳಿದ ಫಲಸ್ತುತಿ ||

ಸೋಮಸೂರ್ಯೋಪರಾಗದಿ ಗೋಸಹಸ್ರಗಳ ಭೂಮಿ ಸುರರಿಗೆ ಸುರ ನದೀತಟದೀ || ಶ್ರೀಮುಕುಂದಾರ್ಪಣವೆಂದು ಕೊಟ್ಟ ಫಲಕಧಿಕವೀಮಧ್ವ ನಾಮವನು ಬರೆದೋದಿದವರ್ಗೆ|| ೨೮ ||

ಪುತ್ರರಿಲ್ಲದವರು ಸತ್ಪುತ್ರರೈದುವರು ಸರ್ವತ್ರದಲಿ ದಿಗ್ವಿಜಯವಹುದು || ಶತ್ರುಗಳ ಕುಲ ಕೆಡುವದಪಮೃತ್ಯು ಬರಲಂಜುವದು ಸೂತ್ರನಾಮಕನ ಸಂಸ್ತುತಿ ಮಾತ್ರದಿ || ೨೯ ||

ಶ್ರೀಪಾದರಾಯ ಪೇಳಿದ ಮಧ್ವನಾಮವಿದು ಸಂತಾಪಗಳ ಕಳೆದು ಪರಮ ಸೌಖ್ಯವನೀವುದು || ಶ್ರೀಪತಿ ಜಗನ್ನಾಥ ವಿಠಲನ್ನ ತೋರಿ ಭವಾ ಕೂಪಾರದಿಂದ ಕಡೆಹಾಯಿಸುವದು || ೩೦ ||

ಜಯಜಯ ಜಗತ್ರಾಣ ಜಗದೊಳಗೆ ಸುತ್ರಾಣ ಅಖಿಳಗುಣ ಸದ್ಧಾಮ ಮಧ್ವನಾಮ ||

---

ಈ ಪ್ರಕಾರ ಅನೇಕ ಕೀರ್ತನೆ, ಸುಳಾದಿ, ಉಗಾಭೋಗಗಳನ್ನು ಕರ್ಣಾಟಕ ಭಾಷೆಯಲ್ಲಿ ರಚಿಸಿ ಕನ್ನಡಿಗರಿಗೆ ಮಹೋಪಕಾರ ಮಾಡಿರುವ ಈ ಮಹಾನುಭಾವರ ಹೆಸರನ್ನು ಕೂಡಾ ಕನ್ನಡಿಗರಾದ ನಾವೇ ಅರಿಯುದಿರುವದು ತೀರಾ ಶೋಚನೀಯವಾದ ಸಂಗತಿಯೇ ಸರಿ. ಅಂತೆಯೇ ನಾವೀಗ ಇವರ ಚರಿತ್ರೆಯನ್ನು ಅತಿ ಸಂಕ್ಷೇಪವಾಗಿಯಾದರೂ ಆಗಲೊಲ್ಲದೇಕೆ. ಮಹಡಿಯ ಮನೆಯ ತಳಹದಿಯಂತೆ ಇದೊಂದು ಪುಟ್ಟಗ್ರಂಥವನ್ನು ಬರೆದು, ಕರ್ಣಾಟಕಸ್ಥರಿಗೆ ಕಾಣಿಕೆಯಾಗಿ ಕೊಟ್ಟಿರುವೆವು. ಶೋಧಕರು ಈ ತಳಹದಿಯ ಮೇಲೆ ಬೇಕಾದಂಥ ವಿಸ್ತಾರವಾದ ಸೌಧವನ್ನು ಸಿದ್ಧಪಡಿಸಲಿ. ಶೃಂಗಾರ ಮಾಡಲಿ. ಕನ್ನಡಿಗರ ಉತ್ಸಾಹವನ್ನು ಹೆಚ್ಚಿಸಲಿ. ಇದೊಂದು ನಮ್ಮ ಆಶೆ.

ಶ್ರೀಪಾದರಾಯರು ಮುಂದೆ ಹಯಗ್ರೀವ ತೀರ್ಥರೆಂಬವರಿಗೆ ಸಂಸ್ಥಾನವನ್ನೊಪ್ಪಿಸಿ ಜ್ಯೇಷ್ಠ ಶುದ್ಧ ಚತುರ್ದಶೀ ದಿವಸದಲ್ಲಿ ವೃಂದಾವನಸ್ಥ

ರಾದರು. ಇವರು ಸಂಸ್ಥಾನ ಪಡೆದದ್ದಾಗಲಿ, ವೃಂದಾವನಸ್ಥರಾದದ್ದಾಗಲಿ ಕಾಲವು ನಿಶ್ಚಯಾತ್ಮಕವಾಗಿ ತಿಳಿದಿಲ್ಲ. ಪ್ರತಿವರ್ಷ ಮುಳಬಾಗಿಲಲ್ಲಿ ಇವರ ಆರಾಧನೆಯು ಬಹಳ ವಿಜೃಂಭಣೆಯಿಂದ ನಡೆಯುತ್ತಿರುವದು. ಇಂಥ ಮಹಾತ್ಮರ ವಾಸಸ್ಥಳವಾದ ಮುಳಬಾಗಿಲ ಕ್ಷೇತ್ರವನ್ನೂ, ಅವರ ವೃಂದಾವನವನ್ನೂ ನಮ್ಮ ವಾಚಕ-ವಾಚಕಿಯರು ಒಮ್ಮೆಯಾದರೂ ಸಂದರ್ಶನ ಮಾಡಿಕೊಂಡು ಪುಣ್ಯಭಾಗಿಗಳಾಗಲೆಂದು ಅವರಲ್ಲಿ ವಿನಯದಿಂದ ವಿಜ್ಞಾಪಿಸಿಕೊಳ್ಳುವೆವು.

ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೆ ||
ನಮಃ ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮಃ ||




ಇದು ಆನಂದವನ-ಅಗಡಿ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ
ಭಿ. ಪ. ಕಾಳೆ, ಇವರಿಂದ ಮುದ್ರಿಸಲ್ಪಟ್ಟಿತು.

(ಪರಿಶಿಷ್ಟ)

# ಶ್ರೀಮತ್ಪದ್ಮನಾಭ ತೀರ್ಥಮಠೀಯ ಗುರುಪರಂಪರಾಪೀಳಿಗೆಯು.

| ನಂಬರ. | ಶ್ರೀಗಳವರ ಹೆಸರು. | | ವೃಂದಾವನಸ್ಥರಾದ ದಿವಸ. |
|---|---|---|---|
| ೧ | ಶ್ರೀಮಧ್ವಾಚಾರ್ಯರು | | ಶಕೆ ೧೨೩೯ನೇ ಪಿಂಗಳ ನಾಮ ಸಂ\| ಮಾ\|ಶು\|೯ |
| ೨ | ಶ್ರೀಪದ್ಮನಾಭ ತೀರ್ಥರು | | ೧೨೫೬ ಶ್ರೀಮುಖ ಸಂ\|. ಪು\| ವ\|೭ |
| ೩ | ಲಕ್ಷ್ಮೀಧರ | ತೀರ್ಥರು | |
| ೪ | ಸಂಕರ್ಷಣ | ತೀರ್ಥರು | |
| ೫ | ಪರಶುರಾಮ | ,, | |
| ೬ | ಆದಿರಾಜ | ,, | |
| ೭ | ಸತ್ಯವ್ರತ | ,, | |
| ೮ | ಸುವರ್ಣವರ್ಣ | ,, | |
| ೯ | ಶ್ರೀಪಾದರಾಜ | ,, | ಜ್ಯೇ. ಶು\|೧೪ |
| ೧೦ | ಹಯಗ್ರೀವ | ,, | |
| ೧೧ | ಶ್ರೀಪತಿ | ,, | |
| ೧೨ | ಶ್ರೀಧರ | ,, | |
| ೧೩ | ಗೋಪಾಲಸ್ವಾಮಿ | ,, | |
| ೧೪ | ರಾಮಚಂದ್ರ | ,, | |
| ೧೫ | ರಘುನಾಥ | ,, | |

| ನಂಬರ. | ಶ್ರೀಗಳವರ ಹೆಸರು. | | ವೃಂದಾವನಸ್ಥರಾದ ದಿವಸ. |
|---|---|---|---|
| ೧೬ | ಲಕ್ಷ್ಮೀಮನೋಹರ | ,, | ಶಾ. ಶ. ೧೬೩೦ |
| ೧೭ | ಲಕ್ಷ್ಮೀಪತಿ | ತೀರ್ಥರು | |
| ೧೮ | ಲಕ್ಷ್ಮೀನಾಥ | ,, | |
| ೧೯ | ಲಕ್ಷ್ಮೀಕಾಂತ | ,, | ಶಾ. ಶ ೧೬೮೯ |
| ೨೦ | ಶ್ರೀಕಾಂತ | ,, | |
| ೨೧ | ಶ್ರೀನಿಧಿ | ,, | |
| | ತೇಜೋನಿಧಿ | ,, | |
| | ತಪೋನಿಧಿ | ,, | |
| | ಯಶೋನಿಧಿ | ,, | |
| | ಸುಗುಣನಿಧಿ | ,, | ಇವರ ಕಾಲಕ್ಕೆ ಮಠ ಹಿಂದಾಯಿತು. |
| ೨೨ | ವಿದ್ಯಾನಿಧಿ | ,, | |
| ೨೩ | ಜ್ಞಾನನಿಧಿ | ,, | |
| ೨೪ | ಗುಣನಿಧಿ | ,, | |
| ೨೫ | ಗುಣಸಾರನಿಧಿ | ,, | |
| ೨೬ | ಪ್ರಜ್ಞಾನಿಧಿ | ,, | ಜ್ಯೈ. ಶು\|೯ |
| ೨೭ | ಸುಬೋಧನಿಧಿ | ,, | ಆ. ಬ\|೪ |
| ೨೮ | ವೈರಾಗ್ಯನಿಧಿ | ,, | ಆ. ಶು\|೭ |
| ೨೯ | ಸುಜ್ಞಾನನಿಧಿ | ,, | ಫಾ. ಶು\|೧೫ |
| ೩೦ | ಸುಗುಣನಿಧಿ | ,, | ವೈ. ಬ\| ೧೪ |
| ೩೧ | ಸುಧೀನಿಧಿ | ,, | ಫಾ. ಬ\| ೮ |
| ೩೨ | ಮೇಧಾನಿಧಿ | ,, | |